ತೀರ್ಥಸಿಂಗ, ಕೊಪ್ಪಳ ಜಿಲ್ಲೆಯ ಸರ್ದಾರಸಿಂಗ, ಅತ್ತರ್‌ಸಿಂಗ, ಧರ್ಮಸಿಂಗ, ಮೈಸೂರು ಜಿಲ್ಲೆಯ ಮಾಧುಸಿಂಗ, ರಾಜ್‌ಕೌರ, ಮಜುನುಸಿಂಗ ಅವರಿಗೂ, ಧಾರವಾಡ ಜಿಲ್ಲೆಯ ಅಜೀತ್‌ಸಿಂಗ, ಚರಣಸಿಂಗ, ಮಾನಕೌರ ಹಾಗೂ ಹುಬ್ಬಳ್ಳಿ ಮತ್ತು ಧಾರವಾಡ ನಗರದ ಸುವಾಹನಸಿಂಗ, ಕಿರಣಸಿಂಗ ಮತ್ತು ಸಿಕ್ಲಿಗರ ಸಮುದಾಯದ ಹಿರಿಯರಿಗೂ ಮತ್ತು ಗಣ್ಯರಿಗೂ ಹಾಗೂ ಎಲ್ಲಾ ಗೆಳೆಯರಿಗೂ, ನಮ್ಮ ಎಲ್ಲ ಹಿತೈಸಿಗಳಿಗೂ ವಂದನೆಗಳು ಅರ್ಪಿಸುತ್ತೇವೆ.

ಪುಸ್ತಕ ರಚನೆಯಲ್ಲಿ ಪ್ರತಿ ಹೆಜ್ಜೆಗೂ ಸಲಹೆ ಸಹಕಾರಗಳನ್ನು ನೀಡಿ ಎಲೆಮರೆ ಕಾಯಿಯಾಗಿ ಕಾರ್ಯ ನಿರ್ವಹಿಸಿದ ಡಾ ಆರ್ ಬಿ ಕುಮಾರ್ ಹಾಗೂ ಅಕ್ಷರ ಸಂಯೋಜಿಸಿದ ಕಮಲಾಪುರದ ಭಾವನಾ ಗ್ರಾಫಿಕ್ಸ್‌ನ ಶ್ರೀನಿವಾಸ ಕೆ ಕಲಾಲ್, ಕನ್ನಡ ವಿಶ್ವವಿದ್ಯಾಲಯದ ಮಲ್ಲಿಕಾರ್ಜುನ ಭೀಮರಾವ್ ಮಾನ್ವಡೆ ಅವರಿಗೆ, ಛಾಯಾಚಿತ್ರ ಗಳನ್ನು ವಿನ್ಯಾಸಗೊಳಿಸಿದ ದೇವಲಾಪುರದ ರೋಹಿತ್ ಗ್ರಾಫಿಕ್ಸ್‌ನ ಗಿರೀಶ ಅವರಿಗೆ, ಮುಖಪುಟ ವಿನ್ಯಾಸಗೊಳಿಸಿದ ಪ್ರತಾಪ ರಾ ಬಹುರೂಪಿ ಅವರಿಗೆ, ಮತ್ತು ಮುದ್ರಣಕಾರರಿಗೆ ಕೃತಜ್ಞತೆಯನ್ನು ಸಲ್ಲಿಸುತ್ತೇವೆ.

ಡಾ ಚಲವಾದಿ ಬಸವರಾಜ
ಶೇಖರಸಿಂಗ್ ಎಸ್

# ಪರಿವಿಡಿ

**ಕೋಷ್ಟಕಗಳು**



**ಭೂಪಟ**

# ೧

## ಪ್ರವೇಶ

ಜಗತ್ತಿನಲ್ಲಿಯ ಮಾನವನ ವಿಕಾಸಕ್ಕೆ ಪರಿಸರ ಅವಶ್ಯಕ. ಆ ಪರಿಸರವು ಪ್ರಶಸ್ತವಾಗಿರಬೇಕು. ಪರಿಸರವಿಲ್ಲದ ಜೀವಿಯ ವಿಕಸನ ಕಷ್ಟವಾಗುತ್ತದೆ. ಈ ಭೂಮಿಯ ಮೇಲೆ ಕೋಟಿಗಟ್ಟಲೇ ವರ್ಷಗಳ ಹಿಂದೆಯೇ ಜೀವಿಗಳು ಉದಯಿಸಿದವು. ತಮ್ಮದೇ ಆದ ಚಿಂತನೆ ಕೈಗೊಂಡವು. ಹೀಗಾಗಿ ಮೊದಲು ಅಕಸೇರುಕ ನಂತರ ಕಶೇರುಕ ಎಂಬ ಜೀವಿಗಳು ಭೂಮಿಯ ಮೇಲೆ ಜನ್ಮ ಹೊಂದಿ ವಿಕಸನ ಹೊಂದುತ್ತಾ ಹೋದವು. ಆ ಹೊತ್ತಿಗೆ ಬಿಸಿಲು, ಗಾಳಿ, ಮಳೆ, ಚಳಿ ಅವಲಂಬಿಸಿಕೊಂಡ ಸಸ್ಯಗಳು ಜನ್ಮತಾಳಿದವು. ಸಸ್ಯಗಳಿಗಾಗಿ ಜೀವಜಂತುಗಳು, ಕ್ರಿಮಿಕೀಟಗಳು, ಪ್ರಾಣಿ–ಪಕ್ಷಿಗಳು, ಹೀಗೆ ಒಂದರ ಹಿಂದೆ ಒಂದು ಬಂದೊದಗಿದ ನಂತರ ಭೂಮಿಯ ಮೇಲೆ ಆಹಾರದ ಜೊತೆಗೆ ಉತ್ತಮ ಪರಿಸರವು ನಿರ್ಮಾಣಗೊಂಡಾಗಲೇ ಮಾನವನು ರೂಪಗೊಂಡು ವಿಕಸನವಾಗುತ್ತಾ ಹೋಗಿರಬೇಕೆಂಬುದು ವಿಜ್ಞಾನಿಗಳ ಅಭಿಪ್ರಾಯ.

ಅಕಶೇರುಕದಂತಹ ಅಮೀಬಾಗಳು ಕಶೇರುಕ ಜೀವಿಗಳಾಗಿ ಮನುಷ್ಯ ರೂಪ ಪಡೆಯಲು ಬಹು ವರ್ಷಗಳೇ ಪಡೆದಿವೆ. ಒಂದು ಜೀವಿಯನ್ನು ತಿಂದು ಇನ್ನೊಂದು ಜೀವಿ ಬದುಕುವುದು ಸಹಜ. ಯಾವ ಕಾರಣಕ್ಕೂ ಬಲಿಷ್ಟವಾದ ಸಂತತಿಯು ಕನಿಷ್ಟವಾದ ಸಂತತಿಗೆ ತಿಂದು ಹಾಕುತಿತ್ತು. ಹೀಗಾಗಿ ಭೂಮಿಯ ಮೇಲೆ ಬಲಿಷ್ಟವಾದ ಜೀವಿಗಳು ಸಹಜವಾಗಿ ಬದುಕುಳಿದವು.

ಥಾಮಸ್ ಹೆನ್ರಿ ಹಕ್ಸಲೀ ಎಂಬ ವಿಜ್ಞಾನಿಯು ಹಲವು ಆಧಾರಗಳನ್ನು ಹೇಳುತ್ತಾ ಗೋರಿಲ್ಲಾ, ಚಿಂಪಾಂಜಿ, ಗಿಬನ್, ಒರಾಂಗೋಟಾಂಗ್ ಹಲವಾರು ಮಾನವರೊಂದಿಗೆ ಸೇರಿಕೊಂಡಿದ್ದರಿಂದ ಮನುಷ್ಯ ವಿಕಸನ ಹೊಂದಿರಬೇಕು ಎಂಬ ಅಭಿಪ್ರಾಯವನ್ನು ಮುಂದಿಡುತ್ತಾರೆ. ಹೀಗಾಗಿ ಹಲವಾರು ಬುಡಕಟ್ಟು ಸಮುದಾಯಗಳು ಉದಯವಾದವು. ಇಲ್ಲಿಯೇ ನೂರಾರು ಬುಡಕಟ್ಟುಗಳು ಬೆಟ್ಟ–ಗುಡ್ಡ–ಕಾಡುಗಳಲ್ಲಿ ವಾಸವಾದ ಜನ ಸಮುದಾಯವು ಹಲವು ವೃತ್ತಿ ಕುಲಕಸಬುಗಳನ್ನು ಕೈಗೊಂಡವು.

ಈಗಾಗಲೇ ಹಲವಾರು ಬುಡಕಟ್ಟು ಸಮುದಾಯಗಳ ಕುರಿತಾಗಿ ಅಧ್ಯಯನಗಳು ನಡೆದಿವೆ. ಆದರೆ ಅಧ್ಯಯನ ನಡೆಯಬೇಕಾದ ಸಮುದಾಯಗಳು ಸಾಕಷ್ಟಿವೆ. ಅಂತಹ

ಸಮುದಾಯಗಳಲ್ಲಿ ಸಿಕ್ಲಿಗರ ಸಮುದಾಯವು ಒಂದಾಗಿದೆ. ಇವರಿಗೆ ಸಿಕ್ಲಿಗರೆಂದು ಜಾತಿ ಪ್ರಮಾಣ ಪತ್ರವನ್ನು ನೀಡುತ್ತಿಲ್ಲ. ಕಾರಣ ಸ್ವತಂತ್ರ ಭಾರತದ ಕರ್ನಾಟಕ ರಾಜ್ಯದಲ್ಲಿ ಇವರನ್ನು ಮೀಸಲಾತಿಯ ಯಾವುದೇ ಪಟ್ಟಿಗೂ ಇದುವರೆಗೂ ಸೇರಿಸಿರುವುದಿಲ್ಲ. ಮೊದಲಿಗೆ ಇವರನ್ನು ಅಪರಾಧಿ ವರ್ಗ(The Criminal Tribe) ಕ್ಕೆ ಸೇರಿಸಲಾಗಿತ್ತು. ಏಕೆಂದರೆ ಇವರು ತಲವಾರ, ಖಡ್ಗ, ಚಾಕು, ಚೂರಿಗಳನ್ನು ತಯಾರಿಸುವುದರಿಂದ ಹೆಚ್ಚು ಜನರು ಇವರನ್ನು ಅನುಮಾನದಿಂದಲೆ ನೋಡುತ್ತಿದ್ದರು ಆದರೆ ಇವರು ಸಂಶಯಾಸ್ಪದ ವ್ಯಕ್ತಿಗಳಲ್ಲ, ಪ್ರಮಾಣಿಕವಾಗಿ ಸತ್ಯದಿಂದ ಬದುಕುವ ವ್ಯಕ್ತಿಗಳಾಳು. ಇವರು ಕಠಿಣ ಪರಿಶ್ರಮದ ಕೆಲಸಗಳನ್ನು ಕೈಗೊಂಡಿದ್ದಾರೆ. ಕಬ್ಬಿಣದ ಉಪಕರಣಗಳ ತಯಾರಿಕೆ ಕೆಲಸವನ್ನು ತುಂಬ ಗಟ್ಟಿಯಾಗಿ ನಿರ್ವಹಿಸಿಕೊಂಡು ಬಂದಿದ್ದಾರೆ ಮತ್ತು ಆ ಕೆಲಸದ ಮೇಲೆಯೇ ಇಂದಿಗೂ ಅವಲಂಬನೆಯಾಗಿದ್ದಾರೆ.

**ಸಿಕ್ಕಲಗಾರ ಮತ್ತು ಸಿಕ್ಲಿಗರ ಸಮುದಾಯಗಳು**

ಸಿಕ್ಕಲಗಾರರು ಮುಖ್ಯವಾಗಿ ಎಮ್ಮೆ ಕೂದಲು ಬೋಳಿಸುವ, ಶೌಚಾಲಯ ಸ್ವಚ್ಛಗೊಳಿಸುವ ಕೆಲಸ ಮಾಡುವರು. ಅವರನ್ನು ಭಾಂಗಿಗಳೆಂದೂ ಸಹ ಕರೆಯಲಾಗುತ್ತದೆ. ಹಿಂದೂ ಮತಾವಲಂಬಿಗಳು, ಮಾಂಸವನ್ನು ತಿನ್ನುತ್ತಾರೆ. ಸಿಕ್ಲಿಗರು ಸಿಖ್ಖ್ ಧರ್ಮದ ಅನುಯಾಯಿಗಳು. ಸಿಖ್ಖ್ ಧರ್ಮದಲ್ಲಿಯ ಪರಿಶಿಷ್ಟರ ಸಮಾನ ಒಂದು ಗುಂಪು. ಗುರುನಾನಕ್ ಅವರನ್ನು ದೇವರೆಂದು ಬಗೆದಿದ್ದಾರೆ. ಇವರು ಹಿಂದೂ ಸಿಕ್ಕಲಗಾರರಿಗಿಂತ ಭಿನ್ನ ಜೀವನಶೈಲಿಯನ್ನು ರೂಢಿಸಿಕೊಂಡಿರುವರು. ಇವರನ್ನು ಸಿಕ್ಕಲಿಗ, ಸಿಕ್ಕಲಗಾರ, ಶಿಕ್ಕಲಿಗರು, ಸಿಕ್ಕಲಗಾರರು, ಶಿಕ್‌ಲಿಗಾರ್, ಶಿಕ್-ಶಿಕ್ಲಿಗಾರ್ ಎಂದು ಬಹು ಬಗೆಯ ಹೆಸರುಗಳಿಂದ ಜನರು ಗುರುತಿಸುತ್ತಾರೆ. ಇವರ ಆಹಾರ-ವಿಹಾರ, ಉಡುಗೆ-ತೊಡಿಗೆ, ಆಚಾರ-ವಿಚಾರಗಳಲ್ಲಿ ವ್ಯತ್ಯಾಸಗಳು ಕಾಣಸಿಗುತ್ತವೆ.

ಸಿಕ್ಲಿಗರು ಪಂಜಾಬದ ಸಿಖ್ ಸಮುದಾಯದ ಅಂಚಿನಿಂದ ಹೊರ ಬಂದು ಹೈದ್ರಾಬಾದ ಮತ್ತು ದೇಶದ ಇತರೆಡೆಗಳಲೆಲ್ಲ ಕಬ್ಬಿಣದ ಕಠಿಣ ಕೆಲಸಗಳನ್ನು ಕೈಗೊಂಡವರು. ಆ ವೃತ್ತಿಯೇ ಇವರ ಜೀವನಾಧಾರದ ಮೂಲ. ಸಿಕ್ಲಿಗರು ಲಿಪಿ ಇಲ್ಲದ ಸಿಕ್ಲಿಗ ಭಾಷೆ ಮಾತನಾಡುತ್ತಾರೆ. ವ್ಯವಹಾರಕ್ಕಾಗಿ ಹಿಂದಿ ಮತ್ತು ಸ್ಥಳೀಯ ಭಾಷೆಯನ್ನಾಡುತ್ತಾರೆ.

**ಸಮುದಾಯದ ಹೆಸರು, ಔಚಿತ್ಯ**

ಭಾರತದ ಪಂಜಾಬ, ಹರಿಯಾಣ, ಚಂಡಿಗಡ, ದೆಹಲಿ ಮತ್ತು ಚತ್ತೀಸಗಡಗಳಲ್ಲಿ ಸಿಕ್ಲಿಗರ ಸಮುದಯವನ್ನು ಪರಿಶಿಷ್ಟ ಜಾತಿಯ ಮೀಸಲಾತಿ ಪಟ್ಟಿಯಲ್ಲಿರಿಸಲಾಗಿದೆ. ಆದರೆ, ಕರ್ನಾಟಕದಲ್ಲಿ ಸ್ವಾತಂತ್ರ್ಯ ಪೂರ್ವದಿಂದಲೂ ವಾಸವಾಗಿದ್ದರೂ ಮೀಸಲಾತಿಯ ಯಾವುದೇ ಪಟ್ಟಿಗೆ ಸೇರಿರುವುದಿಲ್ಲ. ಇವರನ್ನು ಜನ ತಪ್ಪಾಗಿ ಸಿಖ್ಖರೆಂದು ತಿಳಿದಿರುವ ಸಾಧ್ಯತೆಗಳೇ ಹೆಚ್ಚು.

ಸಿಖ್ ಧರ್ಮದಿಂದ ಒಡೆದು ಬಂದಂತಹ ಅಥವಾ ಭಾರತೀಯ ದಲಿತ

ಸಮುದಾಯ ಸಿಖ್ ಧರ್ಮ ಸೇರಲು ಹೋಗಿ ಅಂಚಿಗೆ ನಿಂತ ಗುಂಪೇ ಸಿಕ್ಲಿಗರ ಸಮುದಾಯ ಇರಬಹುದಾಗಿದೆ. ಸಿಖ್ಖ್ ಎನ್ನುವುದು 'ಸ್ಥಿರ'. ಸಿಕ್ಲಿಗರ ಎನ್ನುವುದು ಚಲನಶೀಲ. ಸಿಖ್ 'ಗರ' ಕ್ಕೆ ಉದಾ: ಬಳೆಗಾರ, ಮೀನುಗಾರ, ಈಜುಗಾರ, ಹೀಗೆ ಈ ಪದವು ಸೃಜನಶೀಲತೆಯನ್ನು ತೋರಿಸಿಕೊಡುತ್ತದೆ. ಸಿಕ್ಲಿಗರ ಅನ್ನುವದು ಅಲೆಮಾರಿ ಎನಿಸುತ್ತದೆ.

ಸಿಕ್ಲಿಗರ (Sikligar) ಎನ್ನುವ ಪದವು ದಿಲ್ಲಿ, ಉತ್ತರ ಪ್ರದೇಶ, ಹರಿಯಾಣ, ಹಿಮಾಚಲ ಪ್ರದೇಶ, ಪಂಜಾಬ ಮತ್ತು ಚಂಡಿಗಡಗಳಲ್ಲಿ ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ರುವುದು. ಹರಿಯಾಣದಲ್ಲಿ ಇವರನ್ನು ಬರಿಯಾ (Bariya) ಎಂತಲು ಕರೆಯುವರು.

**ಇದುವರೆಗಿನ ಅಧ್ಯಯನಗಳು**

ಈ ಸಮುದಾಯದ ಬಗೆಗಿನ ಮಾಹಿತಿಗಳನ್ನು ಗಮನಿಸಲಾಗಿದೆ. ಕೆ ಎಸ್ ಸಿಂಗ್ ಅವರು ಸಿಕ್ಲಿಗರ ಕುರಿತಾದ ಮಾಹಿತಿಯನ್ನು ಈ ರೀತಿಯಾಗಿ ವ್ಯಕ್ತಪಡಿಸುತ್ತಾರೆ.

**SIKLIGAR:** Also referred to as siqalgar and siqligar, locally they are called Tala-chabi wala, for they are still engaged in the making and selling of locks. The Patiala is the place of origin. The Popular opinion is that their tradition is to sikle, polish words and other armour, and so they have come to be called Sikliga, and denotes an armourer or burnished of metal. They are found chiefly in large towns and cantonments, but many of them probably returned themselves as lochars'. They migrated to Delhi from Haryana, Punjab, Uttar Pradesh, and Gujarat and are presently settled in rural.

Delhi and in resettlement colonies. Their Population in Delhi, according to the 1981 census, is 8832. It is believed that Marwari was their mother tongue but now they converse in Punjabi and Hindi, and write in the Devanagari and Gurmukhi scripts. They are non-vegetarians but do not eat pork and, of late, some are changing to vegetarianism. Wheat and rice constitute their staple food. Mustard oil, pure ghee and hydrogenated vegetable oils are used for used for cooking. Their men occasionally consume alcoholic drinks purchased from the market.

The Sikligar are divided into different exogamous gotars, such as Joni, Dangi, Tankh, Tilbithia, Patwa, Churiababari, Andhelay, Ghatara, Khichchi and Narelababari. The main functions of these

gotras are to regulate marital alliance and to indicate alliance and to indicate descent. A change in their surnames has been reported, e.g. jooni has changed to Joni. Both children as well as adult marriages are common. Mates are acquired by exchange of sisters. After marriage, residence is patriarchal. Monogamy is the common from though polygyny is permitted in case the first wife is barren. Married women use sindur, bindi and toe-ring as marriage symbols. The girl's parents give dowry either in cash or kind, which is generally equivalent to the one received in their son's marriage. Either spouse may seek divorce on grounds of adultery, maladjustment, cruelty, etc. Now divorce cases have reduced. Window and female divorce re marriages are performed though the palla bandhana ceremony.

Junior levirate and junior sorority are permitted. Most of them live either in extended families. Property is divided equally among the eldest son succeeds the father as head of the family women participate in ritual and religious activities but their participation in politics, social activities and in the mechanism of social control is negligible. Women remain preoccupied with house hold chores and do not contribute to the family income. Birth pollution is observed for one and a quarter months. In in the tonsuring (mundan) ceremony, they just cut off a lock of hair rather then completely shave the head. Marriage rituals are performed in accordance with the Hindu Vedic rites or by circumambulation of the Guru Granth Saheb at the bride's residence. The marriage feast is hosted by the bride's parents. The consummation of the marriage takes place at the bridegroom's residence.

Their traditional occupation was polishing arms and sharpening the edges of swords, knives, etc. They are landless and a majority of them are engaged in making and selling locks and keys. Some are shopkeepers. A few are employed in Government establishments and in defense services. Some are labourers in industries, transport, etc. They send their mail children to work to supplement the family income According to the 1981 census, 25.71

per cent are returned as workers (47.42 percent males and 2.84 percent females). Of them, 5.64 percent workers are returned in the Household industry, 48.22 percent in other- than - household industries, 25.50 percent in construction and 10.08 percent in trade and commerce. The remaining 10.56 percent of the workers are engaged in various other services. Their economy is regulated through well-organized daily markets where the mode of transaction in cash. Their informal Cast Panchayat deals with matrimonial disputes, quarrels, property disputes, etc. Some of them pursue Hinduism whereas others are Sikhs.

They Celebrate either Hindu or Sikh festivals in consonance with their religious beliefs. Some families celebrate both Hindu and Sikh festivals. Sacred Places like Hardwar, Vaishno Devi, Suha ki mata (Panipat), Golden temple (Amritsar) Gurudwara Sheesh Ganj, Bangala Saheb, etc. are Visited on pilgrimage. The Brahman Priest or the Granthi propitiates their Gods and officiates over their life -cycle rituals. A few of them follow the Arya Samaj and Radha Soami sect. Their community - specific Folk - songs are sung by the women. Only the women participate in dance on some happy occasions.

They do not accept food from the Chuhra, Chamar, Kanjar, Dhaiya, Sapare and Musalman but exchange pucca food with the Banjara, Tiagi, Baniya and Agri. The Brahman priest (Pandit) accepts either Sidha or pucca food them. They have free access to public places like temples, crematoria, etc.The Teachers, traders and business man from amongst them. Establish relations with people across community boundaries. Putative kinship relations like Dharam Bhai and bahen are forged with the members of other communities.

Their attitude towards formal Education and modern Medicare is favorable. According to the 1981 Census, their literacy rate is 20.87 percent. The male and female literacy rates are 26.32 percent and 15.12 percent, respectively. The younger generations attitude towards family planning is favorable, whereas the older generation

is either unaware of or else not in favour of family planning methods. They prefer to have two or three children. The facilities of drinking water, electricity, communication and the public distribution system are availed of Most of them use kerosene oil, coal or wood for cooking purposes and negligible number of them use cooking gas.

A few Sikligar have availed of self- employment facilities under the various rural employment programmes like the IRDP. Employment Guarantee Scheme, etc. ಸಿಕ್ಲಿಗರರ ಕುರಿತ ಈ ಮಾಹಿತಿಗಳು ಸಿಖ್ಖರಿಗಿಂತ ಭಿನ್ನವಾಗಿರುವವು.

# ೨

# ಮೂಲ ಮತ್ತು ಪ್ರಸಾರ

## ಸಾಮಾಜಿಕ ಹಿನ್ನೆಲೆ

ಸಿಕ್ಲಿಗರು ಸಿಖ್ ಧರ್ಮವನ್ನು ಒಪ್ಪಿದವರು. ಹೀಗಾಗಿ ಗುರುದ್ವಾರಕ್ಕೆ ಹೋಗುವರು. ಆದರೆ ಸಿಖ್‌ರು ಸಮಾಜಿಕ, ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ದೃಷ್ಟಿಯಿಂದ ಬಲಿಷ್ಟರಾಗಿದ್ದವರು ಸುಸಂಸ್ಕೃತವಾದ ಜೀವನ ಸಾಗಿಸುತ್ತಾರೆ. ಸಿಕ್ಲಿಗರಲ್ಲಿ ಈ ಅಂಶಗಳು ದೊರೆಯುವುದು ಅಪರೂಪ. ಇವರ ಆರ್ಥಿಕ ಸ್ಥಿತಿಯಂತೂ ತುಂಬಾ ಶೋಚನೀಯ ವಾಗಿದೆ.

ಸಿಕ್ಲಿಗರು ರಾಜಾ ರಣಜಿತ್‌ಸಿಂಗ್‌ರ ಆಸ್ಥಾನದಲ್ಲಿ ಯುದ್ಧ ಪರಿಕರಗಳನ್ನು ತಯಾರಿಸಿಕೊಡುವ ಕಾಯಕದಲ್ಲಿ ನಿರತರಾದವರು. ಇವರು ಪ್ರದೇಶದಿಂದ ಪ್ರದೇಶಕ್ಕೆ ಅಲೆಮಾರಿಗಳಾಗಿ ವಲಸೆ ಹೋಗುವಂತವರು. ಕರ್ನಾಟಕದ ಕೆಲವೇ ಕೆಲವು ಭಾಗಗಳಲ್ಲಿ ವಲಸೆ ಬಂದು ಅಲ್ಲಲ್ಲಿ ನೆಲೆ ನಿಲ್ಲಲ್ಲು ಪ್ರಯತ್ನಿಸುತ್ತಿರುವರು.

ಪೂರ್ವದಲ್ಲಿ ಸಿಕ್ಲಿಗರು ಆಶ್ರಯ ಪಡೆದ ಪ್ರದೇಶಗಳ ವಿವರ

ಪಂಜಾಬ

(ರಾಜಾ ರಣಜಿತ್‌ಸಿಂಗ್) ( ೧೭೮೦-೧೮೩೯)

ಹೈದ್ರಾಬಾದ್ ಸಂಸ್ಥಾನ (ನಿಜಾಮರು) (೧೭೨೪-೧೯೪೮)

| | | | |
|---|---|---|---|
| ಕನ್ನಡ ನಾಡಿನ | ಜಮಖಂಡಿ | ಬಿಜಾಪುರ | ಕೊಪ್ಪಳ |
| ಸುರಪುರ ಸಂಸ್ಥಾನ, | ಸಂಸ್ಥಾನ, | ಸಂಸ್ಥಾನ, | ಸಂಸ್ಥಾನಗಳಲ್ಲಿ |

ಸಿಕ್ಲಿಗರು ಆಶ್ರಯ ಪಡೆದರು.

ಮರಾಠರಿಗಿಂತ ಬಲಿಷ್ಟವಾದ ಸ್ವತಂತ್ರ ಸಂಸ್ಥಾನವನ್ನು ಮಾಡಿಕೊಳ್ಳಬೇಕೆಂದು ಹೈದ್ರಾಬಾದ್ ಸಂಸ್ಥಾನದ ನಿಜಾಮನು ತೀರ್ಮಾನಿಸಿದ. ಆ ಪ್ರಕಾರ ತನ್ನ ಸಂಸ್ಥಾನ ಬಲಿಷ್ಟವಾಗಿದೆಯೆಂದು ತೋರಿಸಿ ಕೊಡಲು ರಣಜಿತ್‌ಸಿಂಗನ ಸ್ನೇಹ ಬೆಳೆಸಿದ. ಆ ಕಾರಣಕ್ಕಾಗಿ ಸಿಕ್ಲಿಗರ ಸಮುದಾಯವನ್ನು ಕರೆಸಿಕೊಂಡನು. ಸಿಕ್ಲಿಗರ ಕಾರ್ಯಗಳನ್ನು

ಕಂಡು ಹೈದ್ರಾಬಾದ್ ಸಂಸ್ಥಾನದ ನಿಜಾಮನು ಸಂತೋಷಪಟ್ಟನು. ಈ ಸಂಸ್ಥಾನವು ೧೭೨೪ ರಿಂದ ೧೯೪೮ರ ತನಕ ಸುದೀರ್ಘ ಆಡಳಿತ ಮಾಡಿತು. ಸಿಕ್ಲಿಗರರ ಸಾತ್ವಿಕ, ನಿಷ್ಠಾವಂತ, ಬಲಿಷ್ಟವಾದ ಶೂರರನ್ನು ಕಂಡ ನವಾಬನು ಇವರನ್ನು ಮತ್ತೇ ಪಂಜಾಬಿಗೆ ಕಳಿಸುವುದು ಇಷ್ಟವಿರಲಿಲ್ಲ. ಅವರನ್ನೆಲ್ಲಾ ತನ್ನ ಸಂಸ್ಥಾನದಲ್ಲಿ ಉಳಿಸಿಕೊಂಡನು ಆತನ ಸೈನ್ಯವು ದೊಡ್ಡದಾಯಿತು. ಬಲಿಷ್ಟವಾದ ಆಡಳಿತವು ಆಯಿತು.

ಯುದ್ಧದ ಕಾರ್ಯಗಳು ಮುಗಿದ ತರುವಾಯ ಸಿಕ್ಲಿಗರು ಸುಮ್ಮನೇ ಕೂಡುವರೆಂದು ವಿಶಾಲವಾದ ಹೈದ್ರಾಬಾದ ಸಂಸ್ಥಾನದಲ್ಲಿ ಕಂದಾಯ ವಸೂಲಿಯ ಕೆಲಸವನ್ನು ಸಿಕ್ಲಿಗರಿಗೆ ನೀಡಲಾಯಿತು. ಊರು, ಗ್ರಾಮ, ಹೋಬಳಿಗಳಲ್ಲಿ ಗೌಡರು, ಕುಲಕರ್ಣಿ, ಶ್ಯಾನುಬೋಗರು, ಪಟೇಲರಿಗೆ ಯಾವುದೇ ರೀತಿಯ ಕಂದಾಯ ಕರ ವಸೂಲಿಯನ್ನು ಜನ ಕೊಡದೇ ಇದ್ದಾಗ ಮೌನ ತಾಳುತ್ತಿದ್ದರು. ಇದರಿಂದ ನವಾಬನ ಬೊಕ್ಕಸ ಬರಿದಾಗಹತ್ತಿತು. ಸಿಕ್ಲಿಗ ಜನ ದೇಹ ಆಕಾರಗಳಲ್ಲಿ ಬಲಿಷ್ಟರು. ಅವರ ಕೂದಲುಗಳು ಗಡ್ಡ, ಮೀಸೆಗಳು ಇವರು ತಯಾರಿಸುತ್ತಿದ್ದ ಮಾರಕಾಸ್ತ್ರಗಳಾದ ತಲವಾರ್, ಭರ್ಚಿ, ಜಂಬ್ಯಾ ಮುಂತಾದವು ಸ್ಥಳೀಯ ಜನರಲ್ಲಿ ಭಯ ಹುಟ್ಟಿಸಿದವು. ಆ ಹೆದರಿಕೆಗೆ ಕರ ವಸೂಲಿಗಾಗಿ ಮನೆಮುಂದೆ ಸಿಕ್ಲಿಗರು ಹೋದರೆ ಸಾಕು ಜನ ಕಂದಾಯ ಕೊಟ್ಟು ಕಳಿಸುತ್ತಿದ್ದರು. ಇದರಿಂದ ಕೆಲವೇ ತಿಂಗಳುಗಳಲ್ಲಿ ನವಾಬರಿಗೆ ಸಾಕಷ್ಟು ಲಾಭವಾಗ ಹತ್ತಿತು.

ಹೈದರಾಬಾದ್ ಸಂಸ್ಥಾನಕ್ಕೆ ಕರ್ನಾಟಕದ ಬೀದರ್, ಕಲಬುರ್ಗಿ, ರಾಯಚೂರು ಜಿಲ್ಲೆಗಳು ಸೇರಿದ್ದವು. ಈ ಪ್ರದೇಶದಲ್ಲಿ ಸಿಕ್ಲಿಗರು ನೆಲೆಕಾಣಲಾರಂಭಿಸಿದರು. ನಂತರ ರೈಲ್ವೆಗಳ ಮಾರ್ಗಗಳಲ್ಲಿ ಹರಡಲಾರಂಭಿಸಿದರು. ಕರ್ನಾಟಕದ ಬೀದರ್, ಭಾಲ್ಕಿ, ಕಲಬುರ್ಗಿ, ಯಾದಗಿರಿ, ರಾಯಚೂರು ಜಿಲ್ಲೆಯ ಸಿಂಧನೂರು, ಕೊಪ್ಪಳ ಮುಂತಾದ ಪ್ರದೇಶಗಳಲ್ಲಿ ಸಿಕ್ಲಿಗರು ವಾಸವಾಗಿದ್ದುಕೊಂಡಿದ್ದಾರೆ.

**ಭೌಗೋಳಿಕತೆ**

೧೭೮೦ರಿಂದ ೧೮೩೯ ರ ಅವಧಿಯಲ್ಲಿ ಪಂಜಾಬನ್ನು ರಾಜಾ ರಣಜಿತ್‌ಸಿಂಗ್ ಆಳ್ವಿಕೆ ಮಾಡಿಕೊಂಡಿದ್ದ ಸಂದರ್ಭದಲ್ಲಿ ಸಿಕ್ಲಿಗರು ಪಂಜಾಬ್ ಕಡೆಯಿಂದ ಉತ್ತರ ಪ್ರದೇಶ, ಹರಿಯಾಣ, ಹಿಮಾಚಲ ಪ್ರದೇಶ, ಚಂಡಿಗಡ, ಆಂಧ್ರ ಪ್ರದೇಶ, ಕರ್ನಾಟಕ ಮತ್ತು ದಿಲ್ಲಿಯತ್ತ ವಲಸೆ ಹೋಗಿರುವುದಾಗಿ ತಿಳಿದುಬರುತ್ತದೆ. ಭಾರತದಲ್ಲಿ ಸುಮಾರು ೩೫ ಸಾವರ ಸಿಕ್ಲಿಗರರಿರಬಹುದು (ಕೋಷ್ಟಕ:೨.೧).

ಕರ್ನಾಟಕದ ಜನಗಣತಿಯಲ್ಲಿ ಸಿಕ್ಲಿಗ ಎನ್ನುವ ಪದದಿಂದ ಇವರನ್ನು ದಾಖಲಿಸಿಲ್ಲ. ಕೆಲವರು ಸಿಖ್ಖರೆಂದೇ ತಮ್ಮ ಜಾತಿಯನ್ನು ಬರೆಸಿರುವುದುಂಟು.

**ಕೋಷ್ಟಕ: ೨.೧ ಭಾರತ ಸಿಕ್ಲಿಗರ ಲಿಂಗವಾರು ಜನಸಂಖ್ಯೆ (೨೦೦೧)**

| ಸಂ. | ರಾಜ್ಯ/ಕೇ ಪ್ರದೇಶ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಉತ್ತರಪ್ರದೇಶ(ದೆಹಲಿ) | ೬,,೦೨೬ | ೫,,೫೭೪ | ೧೧,೬೦೦ |
| ೨ | ಹರಿಯಾಣ | ೪,೮೩೧ | ೪,೬೭೧ | ೯,೫೦೨ |
| ೩ | ಹಿಮಾಚಲ ಪ್ರದೇಶ | ೦.೫೩೦ | ೦.೪೯೫ | ೧.೦೨೫ |
| ೪ | ಪಂಜಾಬ | ೪,೬೪೪ | ೪,೦೮೩ | ೮,೭೨೭ |
| ೫ | ಚಂಡಿಗಡ | ೦,೨೮೭ | ೦,೨೪೮ | ೦,೫೩೫ |
| ೬ | ಕರ್ನಾಟಕ* | ೦,೮೫೧ | ೦,೭೯೯ | ೧,೬೫೦ |

ಕನ್ನಡ ಪುಸ್ತಕ ಪ್ರಾಧಿಕಾರದ ೨೦೦೭*ರ ಸಮೀಕ್ಷೆಯ ಪ್ರಕಾರ ಕರ್ನಾಟಕದಲ್ಲಿಯ ಸಿಕ್ಲಿಗರ ನೆಲೆಗಳು ಮತ್ತು ಜನಸಂಖ್ಯೆ ಹೀಗಿದೆ.

**ಕೋಷ್ಟಕ: ೨.೨ ಕರ್ನಾಟಕ ಸಿಕ್ಲಿಗರರ ಜಿಲ್ಲಾವಾರು ಮತ್ತು ಲಿಂಗವಾರು ಜನಸಂಖ್ಯೆ (೨೦೦೭)**

| ಸಂ | ಜಿಲ್ಲೆ | ಕುಟುಂಬ | ಗಂಡು | ಹೆಣ್ಣು | ಒಟ್ಟು |
|---|---|---|---|---|---|
| ೧ | ಬಾಗಲಕೋಟೆ | ೧೮ | ೪೯ | ೩೪ | ೦೮೩ |
| ೨ | ಬೆಂಗಳೂರು | ೨೭ | ೭೨ | ೬೪ | ೧೩೬ |
| ೩ | ಬೆಳಗಾಂವ | ೬೦ | ೧೩೬ | ೧೩೧ | ೨೬೭ |
| ೪ | ಬೀದರ | ೩೧ | ೫೬ | ೬೫ | ೧೨೧ |
| ೫ | ಬಿಜಾಪುರ | ೧೩ | ೩೧ | ೩೨ | ೦೬೩ |
| ೬ | ಧಾರವಾಡ | ೧೨೪ | ೨೭೧ | ೨೫೪ | ೫೨೫ |
| ೭ | ಗದಗ | ೦೩ | ೦೬ | ೦೬ | ೦೧೨ |
| ೮ | ಗುಲ್ಬರ್ಗಾ | ೩೪ | ೭೪ | ೭೨ | ೧೪೬ |
| ೯ | ಹಾವೇರಿ | ೨೦ | ೪೧ | ೫೨ | ೦೯೩ |
| ೧೦ | ಕೊಪ್ಪಳ | ೧೩ | ೨೭ | ೨೪ | ೦೫೧ |
| ೧೧ | ಮೈಸೂರು | ೧೮ | ೪೩ | ೩೭ | ೦೮೦ |
| ೧೨ | ರಾಯಚೂರು | ೧೬ | ೪೫ | ೨೮ | ೦೭೩ |
| | ಒಟ್ಟು | ೩೭೭ | ೯೫೧ | ೭೯೯ | ೧೬೫೦ |

ಕನ್ನಡ ಪುಸ್ತಕ ಪ್ರಾಧಿಕಾರದ ೨೦೦೭ರ ಸಮಗ್ರ ಸಮೀಕ್ಷೆಯ ಪ್ರಕಾರ ಕರ್ನಾಟಕ ರಾಜ್ಯದ ೧೨ ಜಿಲ್ಲೆಗಳಲ್ಲಿ ಕಾಣಸಿಗುವ ಸಿಕ್ಲಿಗರರು ನಗರ, ಪಟ್ಟಣ ಪಂಚಾಯತಿ ವ್ಯಾಪ್ತಿಗೆ ಒಳಪಟ್ಟಿರುವರು. ಗ್ರಾಮೀಣ ಪ್ರದೇಶಗಳಲ್ಲಿ ಇವರು ಕಾಣಸಿಗುತ್ತಿಲ್ಲ.

ಕರ್ನಾಟಕ
ಸಿಕ್ಕಿಗರ ಸಮುದಾಯದ ನೆಲೆಗಳು



### ಕುಟುಂಬ ಗಾತ್ರ

ಸಿಕ್ಲಿಗರ ಕುಟುಂಬಗಳು ಗುಂಪು ಗುಂಪಾಗಿ ನೆಲೆಸುತ್ತವೆ. ಇವರಲ್ಲಿ ಅವಿಭಕ್ತ ಕುಟುಂಬಗಳು ಹಿಂದೆ ಹೆಚ್ಚಾಗಿ ಕಂಡುಬರುತ್ತಿದ್ದರೂ ಇಂದು ಅವುಗಳ ಸ್ಥಾನವನ್ನು ವಿಭಕ್ತ ಕುಟಂಬಗಳು ಆಕ್ರಮಿಸಿಕೊಂಡಿವೆ. ಇಲ್ಲಿ ೧ ರಿಂದ ೪ ರಷ್ಟು ಸಂಖ್ಯೆಯಲ್ಲಿ ಇರುವ ಸದಸ್ಯರ ಕುಟುಂಬಗಳನ್ನು ಚಿಕ್ಕ ಗಾತ್ರದ ಕುಟುಂಬಗಳೆಂದು ೪ ರಿಂದ ೬ರ ಸಂಖ್ಯೆಯಲ್ಲಿರುವ ಸದಸ್ಯರ ಕುಟುಂಬಗಳನ್ನು ಮಧ್ಯಮ ಗಾತ್ರದ ಕುಟುಂಬಗಳೆಂದು ೬ ಕ್ಕಿಂತ ಮೇಲ್ಪಟ್ಟು ಜನಸಂಖ್ಯೆ ಇರುವ ಕುಟುಂಬಗಳನ್ನು ದೊಡ್ಡ ಗಾತ್ರದ ಕುಟುಂಬ ಗಳೆಂದು ಪರಿಗಣಿಸಲಾಗಿದೆ. ಸಿಕ್ಲಿಗರ ಕುಟುಂಬಗಳ ಸರಾಸರಿ ಗಾತ್ರವು ೪.೩೮ ಇರುವುದು.

### ಲಿಂಗಾನುಪಾತ

ಪ್ರತಿ ೧೦೦೦ ಪುರುಷರಿಗೆ ಮಹಿಳೆಯರ ಸಂಖ್ಯೆ ಎಷ್ಟೆಂಬುವುದನ್ನು ಗುರುತಿಸುವುದೇ ಲಿಂಗಾನುಪಾತವಾಗಿರುತ್ತದೆ. ಕರ್ನಾಟಕ ಸಿಕ್ಲಿಗರಲ್ಲಿ ೨೦೦೭ರ ಸಮೀಕ್ಷೆಯ ಪ್ರಕಾರ ೧೦೦೦ ಪುರುಷರಿಗೆ ಸರಾಸರಿ ಮಹಿಳೆಯರ ಪ್ರಮಾಣವು ೯೩೯ರಷ್ಟಿರುವುದು. ೨೦೦೧ರ ಜನಗಣತಿಯ ಪ್ರಕಾರ ಭಾರತದ ಲಿಂಗ ಪ್ರಮಾಣ ೯೩೩. ಆಗಿದ್ದರೆ ಕರ್ನಾಟಕದ ಈ ಪ್ರಮಾಣ ೯೬೫ ಎಂದು ದಾಖಲಾಗಿದೆ.

### ವಯೋಗುಂಪು

ಸಿಕ್ಲಿಗರ ವಯಸ್ಸಿಗನುಗುಣವಾಗಿ ಐದು ಗುಂಪುಗಳನ್ನಾಗಿ ವಿಂಗಡಿಸಲಾಗಿದೆ. ಯಾವುದೇ ಸಮುದಾಯದ ಆರ್ಥಿಕ ಹಾಗೂ ಶೈಕ್ಷಣಿಕ ಅಂಶಗಳನ್ನು ಅರಿಯಲು ಆ ಸಮುದಾಯದ ಜನರ ವಯೋಗುಂಪುಗಳನ್ನು ನೊಡುವುದು ಅಗತ್ಯವಾಗಿದೆ.

**ಕೋಷ್ಟಕ: ೨.೩. ಸಿಕ್ಲಿಗರ ವಯೋ ಗುಂಪುವಾರು ಜನಸಂಖ್ಯೆ (೨೦೦೭)**

| ವಯೋ ಗುಂಪು | ಪುರುಷ | ಮಹಿಳೆ | ಒಟ್ಟು |
|---|---|---|---|
| ೦-೪ | ೯೯ | ೧೧೭ | ೨೧೬ |
| ೫-೧೭ | ೩೩೬ | ೨೮೪ | ೬೨೦ |
| ೧೮-೪೦ | ೩೨೨ | ೩೩೫ | ೬೫೭ |
| ೪೧-೬೦ | ೬೯ | ೪೧ | ೧೧೦ |
| ೬೦+ | ೨೫ | ೨೨ | ೪೭ |
| ಒಟ್ಟು | ೮೫೧ | ೭೯೯ | ೧೬೫೦ |

ಈ ಅಂಶಗಳನ್ನು ಅರಿಯಲು ೪ರ ವಯೋಮಾನದ ಒಳಗಿನ ಮಕ್ಕಳ ಅಂಕಿ ಅಂಶಗಳನ್ನು ಕಲೆಹಾಕಲಾಗಿದೆ. ಈ ವಯೋಗುಂಪನ್ನು ಹೊರಗಿಟ್ಟು ಸಾಕ್ಷರತೆ ಪ್ರಮಾಣ ಅರಿಯಲು ಪ್ರಯತ್ನಿಸಲಾಗಿದೆ. ಇವರ ಒಟ್ಟು ಜನಸಂಖ್ಯೆಯಲ್ಲಿ ಈ ವಯೋಗುಂಪಿನ

ಪ್ರಮಾಣ ೧೩.೦೯ ಇದೆ. ೫ ರಿಂದ ೧೬ರ ವಯೋಮಾನದವರನ್ನು ಸಾಕ್ಷರತೆಗೆ ಒಳಪಡುವ, ಆದರೆ ಉದ್ಯೋಗಕ್ಕೆ ಅರ್ಹವಲ್ಲದ ಗುಂಪೆಂದು ಪರಿಗಣಿಸಲಾಗಿದೆ. ಇವರ ಪ್ರಮಾಣವು ೩೭.೫೮ರಷ್ಟಿದೆ. ೧೮ ರಿಂದ ೪೦ರ ಗುಂಪನ್ನು ಸಂತಾನರ್ಹ, ಕಾಯಕಾರ್ಹ ಗುಂಪೆಂದು ಪರಿಗಣಿಸಲಾಗಿದೆ. ಇವರ ಪ್ರಮಾಣವು(೩೯.೮೨) ಅತ್ಯಧಿಕವಾಗಿದೆ. ೪೧ ರಿಂದ ೬೦ ಗುಂಪನ್ನು ಅನುಭವಿ ಗುಂಪೆನ್ನಬಹುದು. ಇವರ ಪ್ರಮಾಣವು ೬.೬೭ ಇದೆ. ಹಾಗೂ ೬೦ರ ಮೇಲ್ಪಟ್ಟ ವಯೋಮಾನದವರನ್ನು ಅವಲಂಬಿತ ಗುಂಪೆಂದು ಭಾವಿಸಲಾಗಿದೆ. ಇವರ ಪ್ರಮಾಣವು (೨.೮೫)ಅತ್ಯಲ್ಪವಾಗಿದೆ.



## ೩

# ಸ್ಥಳಾವರಣ

**ಮನೆ, ಕೊಟ್ಟಿಗೆ, ಗಲ್ಲಿ, ಎಲ್ಲೆಕಟ್ಟು.**

ಸಿಕ್ಲಿಗ ಬುಡಕಟ್ಟು ಸಮುದಾಯವಾಗಿದೆ. ಇವರು ಕರ್ನಾಟಕದಲ್ಲಿ ಅದರಲ್ಲೂ ಉತ್ತರ ಕರ್ನಾಟಕ, ಹೈದ್ರಾಬಾದ ಕರ್ನಾಟಕದಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಸಿಕ್ಲಿಗರು ವಾಸವಾಗುವ ಸ್ಥಳ ಸಾಮಾನ್ಯವಾಗಿ ಕೊಳಚೆ ಪ್ರದೇಶ, ರೈಲು, ಬಸ್ ನಿಲ್ದಾಣದ ಪಕ್ಕದ ಬಯಲು ಪ್ರದೇಶಗಳಲ್ಲಿ ಬಟ್ಟೆಯ ಡೇರೆಗಳನ್ನು ನಿರ್ಮಿಸಿಕೊಳ್ಳುತ್ತಾರೆ.

ಎಲ್ಲೋ ಒಂದೆರಡು ಕಡೆ ಮಾತ್ರ ಕೆಲವೊಂದು ಕುಟುಂಬಗಳು ಮನೆ ನಿರ್ಮಾಣ ಮಾಡಿಕೊಂಡಿವೆ. ಸಿಕ್ಲಿಗರು ಖಾಯಂ ಆಗಿ ನೆಲೆಸದೆ ಊರಿಂದೂರಿಗೆ ದುಡುಮೆ ಹುಡುಕಿಕೊಂಡು ಅಲೆಯುವುದೇ ಹೆಚ್ಚು. ಇವರಲ್ಲಿ ನೆಲೆನಿಂತವರು ತಮ್ಮ ವಸತಿಗಳನ್ನು ಕಲ್ಲು–ಇಟ್ಟಿಗೆಗಳಿಂದ ಕಟ್ಟಿದ ಗೋಡೆಗೆ ತಗಡಿನ ಷೀಟನ್ನು ಹಾಕಿ ನಿರ್ಮಿಸಿಕೊಳ್ಳುವರು. ಇಲ್ಲವೇ ಮೇಲ್ಹಾವಣಿಗೆ ತೆಂಗಿನ ಗರಿಗಳನ್ನು ಬಳಸಿಕೊಂಡು ಮನೆ ನಿರ್ಮಿಸಿಕೊಳ್ಳುತ್ತಾರೆ ಒಂದೊಂದು ಕಡೆ ಕೇವಲ ತಗಡಿನ ಷೀಟುಗಳನ್ನು ಮೇಲೆ ಹಾಕಿ ಸುತ್ತಲೂ ತಗಡಿನ ಷೀಟುಗಳನ್ನು ಕಟ್ಟಿಕೊಂಡಿದ್ದಾರೆ. ಕೆಲವೊಂದು ಕಡೆ ತೆಂಗಿನಗರಿಗಳನ್ನು ಸುತ್ತಲೂ ಕಟ್ಟಿಕೊಂಡು ಮನೆಯನ್ನು ನಿರ್ಮಿಸಿಕೊಂಡಿದ್ದಾರೆ. ಸಿಕ್ಲಿಗರ ಮನೆಗಳು ಸಾಮಾನ್ಯವಾಗಿ ಮಳೆ ಬಂದರೆ ಸಂಪೂರ್ಣ ಸೋರುವಂತಿರುತ್ತವೆ. ಎಲ್ಲಾದರೂ ಇರಲಿ ಅವರಿಗೆ ಖಾಯಂ ಆದ ವಾಸಸ್ಥಾನವಿಲ್ಲ.

ಕೊಪ್ಪಳ ನಗರದಲ್ಲಿ ದೇವರಾಜ ಅರಸು ಕಾಲೋನಿಯಲ್ಲಿ ರಾಯಚೂರು, ಬೀದರ ಗಳಂತಹ ಪ್ರದೇಶಗಳಲ್ಲಿ ಹಾಗೂ ಧಾರವಾಡದ ಲಕ್ಷ್ಮಿ ಸಿಂಗ್ ಕೆರೆ ಬೆಳಗಾಂವದ ರುಕ್ಮಿಣಿ ನಗರ, ಹುಬ್ಬಳ್ಳಿಯ ಸುಭಾಷ್ ನಗರ, ಶಿಗ್ಗಾಂವ ಇತರ ಪ್ರದೇಶಗಳಲ್ಲಿ ಖಾಯಂ ಆಗಿ ವಾಸವಾಗಿದ್ದಾರೆ. ಉದ್ದನೆಯ ಚಾಪೆ ತಯಾರಿಸಿ ಅವುಗಳನ್ನೇ ಮನೆಯ ಸುತ್ತಲೂ ಗೋಡೆಗಳನ್ನಾಗಿ ಮಾಡಿಕೊಂಡಿದ್ದಾರೆ. ನೆಟ್ಟಿಗಿರುವ ಗೂಟಗಳನ್ನು ಅಡ್ಡಲಾಗಿ ಹಾಕುವ ಬಿದರಿನ ಕಟ್ಟಿಗೆಯ ಮೇಲೆ ಹರಡಿ ತಾತ್ಕಾಲಿಕ ಟೆಂಟು ಮಾಡಿ ಕೊಂಡು ತಮ್ಮ ವಸತಿಗೆ ಭದ್ರತೆಯನ್ನು ಒದಗಿಸಿಕೊಂಡಿದ್ದಾರೆ.ತಮ್ಮ ಸೆಡ್ ಅಥವಾ ಮನೆಯ ಮುಂದೆನೆ ಸ್ನಾನ ಮಾಡಲು ಒಣಗಿದ ಹುಲ್ಲಿನಿಂದ ವ್ಯವಸ್ಥೆ ಮಾಡಿಕೊಂಡಿರು ತ್ತಾರೆ.

ಇತ್ತೀಚೆಗೆ ಕೆಲವು ಕುಟುಂಬಗಳು ಒಂದೇ ಕಡೆ ನೆಲೆಯೂರಿದ್ದರಿಂದ ಸರ್ಕಾರದ ಆಶ್ರಯ ಮನೆಗಳು, ಅಂಬೇಡ್ಕರ್ ಅವಾಜ್ ಯೋಜನೆ, ರಾಜೀವ್‌ಗಾಂಧಿ, ಮತ್ತು ಕೊಳಚೆ ನಿರ್ಮೂಲನಾ ಮಂಡಳಿ ಯೋಜನೆ ಮುಂತಾದ ಯೋಜನೆಗಳ ಸೌಲಭ್ಯವನ್ನು ಕೆಲವು ಕುಟುಂಬಗಳು ಪಡೆದುಕೊಂಡಿವೆ. ಇನ್ನೂ ಬಹುಪಾಲು ಕುಟುಂಬಗಳು ಅಲೆಮಾರಿಗಳಾಗಿ ಊರಿಂದೂರಿಗೆ ಸುತ್ತುವುದನ್ನು ಕಾಣುತ್ತೇವೆ. ವಲಸೆಯೇ ಇವರ ಬದುಕಾಗಿರುವುದರಿಂದ ಸ್ಥಿರವಾಗಿ ನಿಲ್ಲಲು ಆಗುತ್ತಿಲ್ಲ. ತಮಗೆ ಬೇಕಾದ ಸ್ಥಳದಲ್ಲಿ ಕೆಲಸ ಮುಗಿಯುವವರೆಗೂ ಇದ್ದು ಅನಿವಾರ್ಯವಿದ್ದಾಗ ಬೇರೆ ಸ್ಥಳಗಳಿಗೆ ವಲಸೆ ಹೋಗುತ್ತಾರೆ.

ಸಿಕ್ಲಿಗರಲ್ಲಿ ಮೂರು ಹಂತದಲ್ಲಿ ಸ್ಥಳಾವರಣಗನ್ನು ಕಾಣಬಹುದು. ನಿತ್ಯ ಬದುಕಿಗೆ ಸಂಬಂದಿಸಿದಂತೆ, ಅಂದರೆ ಊಟ, ನಿದ್ರೆ, ಆಹಾರ ತಯಾರಿಕೆ ಮುಂತಾದಕ್ಕೆ ಸಂಬಂಧಿಸಿ ದಂತೆ ಇರುತ್ತದೆ. ಡೇರೆಗಳು ಚಿಕ್ಕವಿರುವುದರಿಂದ ಅಡುಗೆಯನ್ನು ಬಯಲು ಜಾಗದಲ್ಲಿ ಮಾಡುತ್ತಾರೆ. ಊಟ, ನಿದ್ರೆಗಳು ಗುಡಾರದ ಒಳಗೂ, ಹೊರಗೂ ನಡೆಯುವುದುಂಟು.

ಸಿಕ್ಲಿಗರಲ್ಲಿ ಹೆರಿಗೆ, ಋತುಮತಿಯಾದರೆ, ಸಾವಿಗೆ ಸಂಬಂಧಿಸಿದ ಆಚರಣೆಗಳಲ್ಲಿ ಸೂತಕವಿರುತ್ತದೆ. ಈ ಮೂರು ಕ್ರಿಯೆಗಳು ನಡೆಯುವಾಗಲೂ ಸೂತಕದ ಸ್ಥಳಾವರಣ ಒಳಗೊಂಡಿರುತ್ತವೆ.

ದೈವಗಳಿಗೆ ಸಂಬಂದಿಸಿದಂತೆ ಇವರು ಗುರು ನಾನಕರನ್ನು ಪೂಜಿಸುವರು. ಹೀಗಾಗಿ ಇವರವೇ ಪ್ರತ್ಯೇಕ ದೇವಮಂದಿರಗಳೂ, ದೇವರು ಇರದೆ ಸಿಖ್ಖರ ದೈವಗಳನ್ನೆ ಪೂಜಿಸುವರು.

೪

# ಬಂಧುತ್ವ ಮತ್ತು ವಿವಾಹ

ಸಮುದಾಯಗಳನ್ನು ವಂಶ, ಕುಟುಂಬ, ಕುಲ, ಗೋತ್ರ, ಬಳಿ, ಬೆಡಗುಗಳಿಂದ ಗುರುತಿಸಲಾಗುವುದು.

**ಟಾಂಕ್ (ಕುಲ/ಬೆಡಗು)**

ಬುಡಕಟ್ಟು ಜನರ ಸಾಮಾಜಿಕ ಸಂಘಟನೆಯು ಅವರ ರಕ್ತ ಸಂಬಂಧದ ಮೇಲೆ ಅವಲಂಬಿಸಿರುತ್ತದೆ. ರಕ್ತ ಸಂಬಂಧವನ್ನು ಬೆಳೆಸಲು ಬೆಡಗುಗಳನ್ನು ಗಮನಿಸಲಾಗುತ್ತದೆ. ಸಿಕ್ಲಿಗರಲ್ಲಿ ಹದಿನೆಂಟು ಟಾಂಕ್ ಅಂದರೆ ಬೆಡಗಗಳು ಕಂಡುಬರುತ್ತವೆ.

ಸಮ ಬೆಡಗುಗಳಲ್ಲಿ ವೈವಾಹಿಕ ಸಂಬಂಧ ಏರ್ಪಡುವುದಿಲ್ಲ. ಹೀಗಾಗಿ ಇಲ್ಲಿಯ ಜೂಣಿ ಹಾಗೂ ಜೂಣಿಯರ ಮಧ್ಯ ಮದುವೆಯಾಗುವುದಿಲ್ಲ. ಇವರು ಸಹೋದರ ಸಂಬಂಧಿಯಾಗಿ ಕಂಡು ಬರುತ್ತಾರೆ. ಅದೇ ಜೂಣಿ ಮತ್ತು ಮುದ್ರಾವಾಲೆ ಟಾಂಕ್ ಎಂಬ ಎರಡು ಬೆಡಗಗಳು ನಡುವೆ ವಿವಾಹವಾಗಲೂ ಅಡ್ಡಿಯಿಲ್ಲ. ಅಂದರೆ ಬೆಸ ಬೆಡಗುಗಳೊಂದಿಗೆ ವಿವಾಹ ಮಾನ್ಯವಿರುವುದು. ಸಿಕ್ಲಿಗರಲ್ಲಿಯ ಬೆಡಗಗಳ ವಿವರ ಹೀಗಿದೆ.

೦೧. ಬಿಚ್ಚು ಕಾ ಟಾಂಕ್ : ಚೇಳು

೦೨. ಬುರಾಣಿ ಟಾಂಕ್ : ಬಿಳಿಬಣ್ಣದ ದೇಹ ತಲೆಯ ಮೇಲಿನ ಕೂದಲು ಕಂದು ಬಣ್ಣದಿಂದ ಕೂಡಿರುವುದರಿಂದ ಬುರಾಣಿ ಹೆಸರು ಬಂದಿರುವುದು.

೦೩. ಬೌಂಡ್ ಟಾಂಕ್ : ಈ ಸಮುದಾಯದ ವ್ಯಕ್ತಿಯಲ್ಲಿ ಒಬ್ಬ ಒಮ್ಮೆ ಅನೇಕ ಗುಂಗಿ ಹುಳುಗಳನ್ನು ಸಾಯಿಸಿದನು. ಅಂದಿನಿಂದ ಇವನ ವಂಶದವರಿಗೆ ಬೌಂಡ ಟಾಂಕ್ ಎಂದು ಕರೆಯುವರು.

೦೪. ಭಾವರಿ ಅಂದ್ರೆಲೇ ಟಾಂಕ್ : ಕಣ್ಣು ಇಲ್ಲದೇ ಹುಟ್ಟಿದ ತಾಯಿಯ ಮಗ

೦೫. ಚೂರಿ ಮಾರ್ ಭಾವರಿ ಟಾಂಕ್: ಇಬ್ಬರು ಅಣ್ಣ ತಮ್ಮಂದಿರು ಇರುತ್ತಾರೆ. ಅಣ್ಣ ಒಂದು ದಿನ ಮೀನು ತಂದು ಕೊಟ್ಟ.. ಅಣ್ಣನ ಹೆಂಡತಿಗೆ ಮೀನಿನ ಕಣ್ಣುಗಳ ಮೇಲೆ ಮನಸ್ಸು ಆಯಿತು. ಮೀನಿನ ಸುಂದರ ಕಣ್ಣುಗಳ ಮೇಲೆ ಮನಸ್ಸು ಮಾಡಿದ ಆಕೆ ಮುಂದೆ ಸುಂದರ ಕಣ್ಣುಗಳ ಗಂಡಸರ ಮೇಲೆ ಮನಸ್ಸು ಮಾಡುತ್ತಾಳೆಂದು ಬಗೆದು ಅವಳನ್ನು ಕೊಂದುಹಾಕಿದ. ಹಾಗಾಗಿ

ಇವರಿಗೆ ಚೂರಿ ಮಾರ್ ಭಾವರಿ ಟಾಂಕ್ ಎಂದು ಹೆಸರು ಬಂತು.

೦೬. ಡಾಂಗಿ ಟಾಂಕ್ : ಕತ್ತೆಯ ಮೇಲೆ ಸಾಮಾನುಗಳನ್ನು ಹೇರಿಕೊಂಡು ಊರೂರು ತಿರುಗುವ ಅಲೆಮಾರಿ ಗುಂಪು.

೦೭. ದುದಾಣಿ ಟಾಂಕ್ : ಹಾಲು

೦೮. ಗೋಡಾ ಚಡೆ ಡಾಂಗಿ ಟಾಂಕ್ : ಉಳಿದ ಸಿಕ್ಲಿಗರ ಬೆಡಗಿನವರು ತಯಾರು ಮಾಡಿದ ಸಾಮಾನುಗಳನ್ನು ಇವರು ಕುದುರೆಯ ಮೇಲೆ ಹಾಕಿಕೊಂಡು ಊರಿಂದೂರಿಗೆ ಅಲೆದು ಮಾರಾಟ ಮಾಡುವರು.

೦೯. ಗೊಹು ಕೆ ಟಾಂಕ್ : ತಿಪ್ಪಿ ಹತ್ತಿರ ಗುಡಿಸಲು ಹಾಕಿಕೊಂಡು ಹಂದಿ ಶಿಕಾರಿ ಮಾಡುವವರು.

೧೦. ಜೂಣಿ ಟಾಂಕ್ : ಊಟ ಮತ್ತು ತಲೆಗೆ ತುಪ್ಪ ಹೆಚ್ಚಾಗಿ ಬಳಸುವರು

೧೧. ಕಲಾಣಿ ಟಾಂಕ್ : ಕಲಾಕಾರರು.

೧೨. ಲಂಗೋಟಿ ಬಾಗ್ದಾ ಟಾಂಕ್: ಸಿಕ್ಲಿಗರ ಬೇರೆ ಬೇರೆ ಬೆಡಗಿನ ಕುಟುಂಬಗಳಿಗೆ ಮದುವೆ ಇನ್ನಿತರ ಕಾರ್ಯಕ್ರಮದಲ್ಲಿ ಅಡುಗೆ ಮಾಡುವವರಾಗಿರುವರು.

೧೩. ಮುದ್ರ ವಾಲೆ ಟಾಂಕ್: ಕಿವಿಯಲ್ಲಿ ಓಲೆ ಧರಿಸುವುವರು.

೧೪. ಪಟ್ವಾ ಕೆ ಟಾಂಕ್ : ರಾತ್ರಿ ತಲೆಯ ಬುಡಕ್ಕೆ ಪಗಡೆಯಲ್ಲಿ ಹಣವನ್ನು ಇಟ್ಟು ಕೊಂಡು ಮಲಗುವವರು.

೧೫. ರಸೂ ಚಟಾ ಟಾಂಕ್ : ಊಟದಲ್ಲಿ ನಿತ್ಯ ಮೀನಿನ ಸಾರು ಬಳಸುವವರು.

೧೬. ರಬಾಬಿ ತಿಲ್ ಪಿತಿಯಾ ಟಾಂಕ್ : ಗಂಡನ ಜೊತೆ ಚಿತೆಯಲ್ಲಿ ಸಾಯಲು ನಿರಾಕರಿಸಿದ ಹೆಣ್ಣುಮಗಳ ಗುಂಪು

೧೭. ಸತಿ ಕೆ ತಿಲ್ ಪಿತಿಯಾ ಟಾಂಕ್ : ಗಂಡ ಸತ್ತಾಗ ಗಂಡನೊಂದಿಗೆ ಸಹಗಮನ ಮಾಡುವವರು.

೧೮. ತಿಲ್ ಭಿತಿಯಾ ಟಾಂಕ್: ಇದರಲ್ಲಿ ರುಬಾಬಿ ಮತ್ತು ಪಿತಿಯಾ ಎಂಬ ಎರಡು ಒಳಪಂಗಡಗಳಿವೆ. **ರುಬಾಬಿ:** ಗಂಡನ ಜೊತೆಯಲ್ಲಿ ಚಿತೆಯಲ್ಲಿ ಸಾಯಲು ನಿರಾಕರಿಸಿದ ಹೆಣ್ಣುಮಕ್ಕಳ ಗುಂಪು.

**ಪಿತಿಯಾ:** ಗಂಡನ ಚಿತೆಯಲ್ಲಿ ಜೀವಂತವಾಗಿ ಸಾಯುವ ಸತಿಯ ಗುಂಪು.

**ವಿವಾಹ ಪದ್ಧತಿ**

ಸಿಕ್ಲಿಗರಲ್ಲಿ ತೆರ ಪದ್ಧತಿ ಇರುವುದು. ಹೆಣ್ಣಿನ ಕಡೆಯವರಿಗೆ ಹೆಚ್ಚಿನ ಗೌರವ ಇರುವುದು. ತೆರದೊಂದಿಗೆ ಸೀರೆ ಹಣ ಮುಂತಾದವುಗಳನ್ನು ನೀಡಿ ಹೆಣ್ಣನ್ನು ಪಡೆದುಕೊಳ್ಳುತ್ತಾರೆ.

ಸಿಕ್ಲಿಗರ ವಿವಾಹ ಪದ್ಧತಿಯಲ್ಲಿ ಮದುಮಗನ ಉಡುಪುಗಳು ಗುಜರಾತಿ ಜನರ ಉಡುಪುಗಳನ್ನು ಹೋಲುತ್ತವೆ. ತಲೆಗೆ ಪೇಟ, ಮೈಮೇಲೆ ಹೊಸ ಧೋತರ ಅಂಗಿ, ಕಾಲಿಗೆ ತೆಳುವಾದ ಚಪ್ಪಲನ್ನು ಹಾಕಲಾಗುತ್ತದೆ. ಹಣೆಗೆ ಬಾಸಿಂಗ ಕಟ್ಟುತ್ತಾರೆ.

ಮದುಮಗಳಾದವಳಿಗೆ ಹೊಸ ಸೀರೆಯನ್ನು ತಂದು ಉಡಿಸಲಾಗುವುದು. ಮದು ಮಗಳು ತನ್ನ ಮುಖವನ್ನು ಪೂರ್ಣವಾಗಿ ಸೀರೆಯ ಸೆರಗಿನಿಂದ ಮುಚ್ಚಿಕೊಳ್ಳುತ್ತಾಳೆ. ಅಕ್ಷತಾ ಕಾರ್ಯವನ್ನು ಪೂರ್ಣಗೊಳಿಸಲು ವರನ ಮನೆಗೆ ವಧುವನ್ನು ಕರೆದುಕೊಂಡು ಹೋಗುವ ಪದ್ಧತಿಯಿದೆ. ವಧುವಿಗೆ ವರನ ಅಣ್ಣ ಇಲ್ಲವೇ ಅವರ ಸಂಬಂಧಿಕರಲ್ಲೊಬ್ಬರು ಆಕೆಯನ್ನು ಮದುವೆಯ ಮಂಟಪಕ್ಕೆ ಹೊತ್ತುಕೊಂಡು ಹೋಗುವರು.

ಅಕ್ಷತಾರೋಪಣದ ಮುಂಜಾನೆ ಬೀಗರಲ್ಲಿ ಪರಸ್ಪರ ಅರಿಷಿಣ ಹಚ್ಚುವ ಕೆಲಸ ಕೈಗೊಳ್ಳುತ್ತಾರೆ. ಹಿಂದಿನ ದಿನಗಳಲ್ಲಿ ಏಳು ದಿವಸಗಳ ಕಾಲ ಮದುವೆ ಜರುಗುತ್ತಿತ್ತು. ಈಗ ಕೇವಲ ಒಂದೇ ದಿನದಲ್ಲಿ ಮದುವೆ ಮಾಡಿ ಮುಗಿಸುತ್ತಾರೆ. ಮದುವೆಯ ಮೊದಲ ದಿನವೇ ವಧು-ವರರಿಗೂ ಅರಿಷಿಣವನ್ನು ಹಚ್ಚುತ್ತಾರೆ. ಮೊದಲು ಏಳು ಕೆಜಿ ಅರಿಶಿಣ ಹಚ್ಚಲೇಬೇಕು ಎನ್ನುವ ನಿಯಮವಿತ್ತು. ಈಗ ಮೂರುವರೆಯಿಂದ ಎರಡುವರೆ ಕೆಜಿಗೆ ಬಂದಿಳಿದಿದೆ. ವರನ ಬೆನ್ನಿಗೆ ವಧುವೆ ಅರಿಷಿಣ ಹಚ್ಚುತ್ತಾಳೆ. ವಧು ನಂತರದಲ್ಲಿ ತನ್ನ ಕೈಯಿಂದ ವರನ ಬೆನ್ನಿಗೆ ಎಣ್ಣೆ ಸವರುವ ಮೂಲಕ ಕಾರ್ಯ ನಡೆದು ಕೊನೆಗೆ ನೀರು ಹಾಕಿ ಸ್ನಾನವನ್ನು ಮಾಡಿಸುತ್ತಾರೆ. ತರುವಾಯ ಎಲೆಯ ಗಂಬದ ಹತ್ತಿರ ವಧು-ವರರನ್ನು ತಂದು ಕೂಡಿಸುತ್ತಾರೆ. ಎಲೆಗಂಬಕ್ಕೆ ಪ್ರದಕ್ಷಿಣೆ ಹಾಕಿಸುತ್ತಾರೆ. ನಂತರ ಗುರುಗ್ರಂಥಸಾಹೇಬದ ಪಠಣ ಜರುಗುತ್ತದೆ. ವಧು-ವರರ ಕೈಯ ಹೆಬ್ಬೆರಳುಗಳ ಗುರುತನ್ನು ಸಹಿಯಾಗಿ ಹಾಕಿಸಿಕೊಳ್ಳುತ್ತಾಳೆ. ವಿದ್ಯಾವಂತ ರಾಗಿದ್ದರೆ ಸಹಿ ಹಾಕಿಸಿಕೊಳ್ಳುವರು. ಗ್ರಂಥಸಾಹೇಬದ ಸಮಕ್ಷಮದಲ್ಲಿ ಮದುವೆ ಮಾಡಿಸುವ ಪದ್ಧತಿಯಿದೆ. ಇವರಲ್ಲಿ ವಿಶೇಷವಾಗಿ ಹೆಣ್ಣನ್ನು ಹುಡುಕುವ ಸಲುವಾಗಿ ಬೇರೆ ಪ್ರದೇಶ ಹಾಗೂ ಬೇರೆ ರಾಜ್ಯಗಳಿಗೆ ಹೋಗಿ ತಮ್ಮ ಮದುವೆ ಸಂಬಂಧವನ್ನು ಕುದುರಿಸಿಕೊಂಡು ಬರುತ್ತಾರೆ. ಉದಾ: ಹೈದರಾಬಾದ, ನಾಂದೇಡ ಮುಂತಾದವುಗಳು.

ಆಧುನಿಕ ದಿನಗಳಲ್ಲಿ ಕೂಡಾ ಇಂತಹ ಸಂಪ್ರದಾಯಗಳು ಮುಂದುವರೆದುಕೊಂಡು ಬಂದಿವೆ. ಕೆಲವು ಆಚರಣೆಗಳಲ್ಲಿ ಅಲ್ಲಲ್ಲಿ ಬದಲಾವಣೆಯಾಗಿರುವುದು ಕಂಡುಬರುತ್ತದೆ. ಪ್ರತಿಯೊಂದು ಬಟ್ಟೆಯ ವಿಧಿ-ವಿಧಾನಗಳನ್ನು ಹಾಕಿಕೊಳ್ಳುವಲ್ಲಿ ಸಾಕಷ್ಟು ಬದಲಾಗಿದೆ. ಮದುವೆ ಸಂದರ್ಭದಲ್ಲಿ ಅತ್ತೆ ಮಾವ ಹಾಗೂ ಆತನ ಸಂಬಂಧಿಕರನ್ನೆಲ್ಲಾ ಚೆನ್ನಾಗಿ ನೋಡಿಕೊಳ್ಳಬೇಕು. ತಮ್ಮ ತಂದೆ ತಾಯಿ ಸಂಬಂಧಿಕರನ್ನೆಲ್ಲಾ ಕರೆಯಿಸಬೇಕು. ಹಾಗಾಗಿ ಮದುವೆ ಎನ್ನುವುದು ಕೇವಲ ಗಂಡು ಹೆಣ್ಣುಗಳ ನಡುವೆ ಬೆಳೆಯುವ ಸಂಬಂಧವಷ್ಟೆ ಅಲ್ಲ. ಇಡೀ ಬಂಧುಗಳು ಮದುವೆಯ ಮೂಲಕ ಮುಖಾ ಮುಖಿಯಾಗುವರು. ವಿವಾಹಗಳು ಜರುಗಿ ಬಿಟ್ಟರೆ ಸಂಪೂರ್ಣವಾಗಿ ಬಿಕ್ಕಟ್ಟಾದ ಚೌಕಟ್ಟಿನಲ್ಲಿರಬೇಕಾಗುತ್ತದೆ. ವಿವಾಹ ಪೂರ್ಣಗೊಂಡ ಮೇಲೆ ಹೆಣ್ಣು ತಂದೆ ತಾಯಿಗಿಂತ ಗಂಡನ ಮೇಲೆ ಅವಲಂಬಿತವಾಗುತ್ತಾಳೆ. ಗಂಡನಾದವನು ವಿವಾಹವಾದ ಕೂಡಲೇ ತಾನೇ ಒಂದು ಸ್ವತಂತ್ರ ಜೀವನ ನಿರ್ವಹಿಸಿಕೊಂಡು ಹೋಗಲು ಅವಕಾಶ ಮಾಡಿಕೊಡುತ್ತಾರೆ ಅಥವಾ ಮದುವೆಯ ಪೂರ್ವದಲ್ಲಿಯೇ ಪ್ರತ್ಯೇಕ ಮನೆಯ ನಿರ್ಮಾಣ ಮಾಡಿರುತ್ತಾರೆ.

ಮದುವೆ ಆಗುವ ಹೆಣ್ಣು ಗಂಡುಗಳಿಗೆ ವಯಸ್ಸಿಗೆ ನಿರ್ಬಂಧ ಹಾಕಲಾಗಿದೆ. ಹೆಣ್ಣಿಗೆ ಹದಿನೈದು, ಗಂಡಿಗೆ ಹದಿನಾರು ವರ್ಷ ಮಾತ್ರ ವಯೋಮಿತಿಯನ್ನು ಗುರುತಿಸಿ ಕೊಂಡಿದ್ದಾರೆ. ಇವರಲ್ಲಿ ಹುಡುಗ ವಯಸ್ಕನಾಗುತ್ತಿದ್ದಂತೆಯೇ ಪೋಷಕರಿಗೆ ಮದುವೆ ಮಾಡುವುದೊಂದೆ ಜವಾಬ್ದಾರಿ, ಮುಂದಿನದು ಸ್ವತಂತ್ರ ಜೀವನವಾಗಿರುತ್ತದೆ. ಹಿರಿಯರು ಸೇರಿಕೊಂಡು ಹುಡುಗನಿಗೆ ಕನ್ಯೆಯನ್ನು ನೋಡುವರು ಇಲ್ಲವೇ ಮನೆಗೆ ಹಿರಿಯ ಸೊಸೆಯಾದವಳು ಅಂದರೆ ಅತ್ತಿಗೆಯಾದವಳು ಮೈದುನನಿಗೆ ಕನ್ಯೆ ಗೊತ್ತುಪಡಿಸುತ್ತಾಳೆ. ವಿವಾಹದ ಬಗೆಗೆ ಅನೇಕ ಆಶೆ ಆಕಾಂಕ್ಷೆಗಳನ್ನು ಈ ಸಮುದಾಯ ಹೊಂದಿದೆ. ಇತ್ತೀಚೆಗೆ ಬಾಲ್ಯ ವಿವಾಹಗಳನ್ನು ಮಾಡುವುದಕ್ಕೆ ಆಸ್ಪದ ಕೊಡುತ್ತಿಲ್ಲ. ಹುಡುಗಿ ಪ್ರೌಢಳಾದ ಮೇಲೆ ಮದುವೆ ಮಾಡುವ ಹಂತ ತಲುಪಿದ್ದಾರೆ.

ದೈವ ಸಂಬಂಧಿ ಉಡಿಗೆ–ತೊಡಿಗೆ ತೊಡಿಸುವಾಗಲೂ ಸಿಕ್ಲಿಗರಲ್ಲಿ ಕಬ್ಬಿಣದ ವಸ್ತುಗಳನ್ನು ಬಳಸುತ್ತಾರೆ. ಧಾರ್ಮಿಕತೆಗೆ ಸಂಬಂಧಿಸಿದ ಖಡ್ಗ ಮತ್ತು ಕಂಗನ್ ಎಂಬ ಎರಡು ವಸ್ತುಗಳ ಉಪಕರಣಗಳನ್ನು ಹೊಂದಿರುತ್ತಾರೆ. ಮದುವೆಯ ಸಂದರ್ಭ ದಲ್ಲಿ ಧಾರ್ಮಿಕ ಆಚರಣೆಯ ನಿಮಿತ್ತ ಖಡ್ಗ ಮತ್ತು ತಲವಾರನ್ನು ಸಿಕ್ಲಿಗರ ಮದುವೆಯ ಹೊತ್ತಿನಲ್ಲಿ ಆಚರಣೆಗಾಗಿ ಕಲಾಪ್ರದರ್ಶನ ಮಾಡುವ ಪದ್ಧತಿ ಇಂದಿಗೂ ಮುಂದುವರೆಸಿ ಕೊಂಡು ಬಂದಿದ್ದಾರೆ.

### ವಿವಾಹದ ಬಗೆಗಳು

#### ಬಹುಪತ್ನಿತ್ವ

ಸಿಕ್ಲಿಗರ ಸಮುದಾಯ ಬಹುಪತ್ನಿತ್ವ ವಿವಾಹ ಪದ್ಧತಿಗೆ ಅನುಮತಿ ನೀಡಿಲ್ಲ ಆದರೆ ಗಂಡ–ಹೆಂಡತಿ ಮಧ್ಯ ವೈವಾಹಿಕ ಸಂಬಂಧಗಳಲ್ಲಿ ಬಿರುಕುಂಟಾಗಿ ವಿಚ್ಛೇದನವಾದಾಗ ಇಲ್ಲವೇ ಪತಿ, ಪತ್ನಿ ತೀರಿಕೊಂಡು ಹೋದಾಗ ಮರು ಮದುವೆ ಆಗಬಹುದು.

#### ವಿವಾಹದ ವಿಧಿ–ವಿಧಾನಗಳು

ಸಿಕ್ಲಿಗರರ ವಿವಾಹದ ವಿಧಿವಿಧಾನಗಳು ಬಹಳ ಸರಳವಾದ ರೀತಿಯಲ್ಲಿ ನಡೆದು ಕೊಂಡು ಬರುತ್ತಿವೆ. ಸಮುದಾಯದ ಹಿರಿಯರೇ ಮದುವೆಯ ಸಂಪೂರ್ಣ ಜವಾಬ್ದಾರಿ ಹೊರುತ್ತಾರೆ. ಈ ಸಮುದಾಯದಲ್ಲಿ ಹಿರಿಯರನ್ನು ಪಂಚರೆಂದು ಕರೆಯುತ್ತಾರೆ. ಅವರೇ ಮುಂದೆ ನಿಂತು ಎಲ್ಲಾ ಕಾರ್ಯ ನಡೆಸುತ್ತಾರೆ. ಹಿರಿಯರಲ್ಲಿ ಒಬ್ಬರನ್ನು ಅವರೇ ಆರಿಸಿಕೊಂಡು ಪೂಜಾರಿಗಳನ್ನಾಗಿ ಮಾಡುತ್ತಾರೆ. ಪೂಜಾರಿಗಳಾ ದವರು ಹೇಳಿದಂತೆ ಮದುವೆ ನಡೆಯಬೇಕು. ಹಿರಿಯರನ್ನು ಪಂಚರೆಂದು, ಪೂಜಾರಿಗಳನ್ನು ಧ್ಯಾನರೆಂದು ಸಿಕ್ಲಿಗರರು ಕರೆದು ಅವರಿಗೆ ಗೌರವದ ಸ್ಥಾನ ಕೊಡುತ್ತಾರೆ. ಈ ಕೆಲಸಕ್ಕೆ ನಂಬಿಕೆಗೆ ಅರ್ಹರಾದವರನ್ನು ಆರಿಸುತ್ತಾರೆ. ಸಿಕ್ಲಿಗರು ಈ ಹಿರಿಯರನ್ನು ಆರಿಸುವಾಗ ಹದಿನೆಂಟು ಬೆಡಗುಗಳಲ್ಲಿ ಯಾರೇ ಇರಲಿ ಅವರಲ್ಲಿ ಹಿರಿಯರನ್ನು ಮಾತ್ರ ಆಯ್ದುಕೊಳ್ಳುವರು ಇಂಥದೇ ಬೆಡಗಿನವರೆ ಆಗಬೇಕೆಂಬ ನಿಯಮ ಇವರಲ್ಲಿಲ್ಲ. ಸಮುದಾಯದಲ್ಲಿರುವ

ಹಿರಿಯರು ಯಾವ ಬೆಡಗಿನವರೆ ಆಗಿರಲಿ ಅವರು ದೈವಕ್ಕೆ ಸಮಾನರು ಎಂದು ಬಗೆಯುತ್ತಾರೆ.

ವಿವಾಹದ ದಿನದಂದು ಪೂಜಾರಿ ವಧು ಮತ್ತು ವರನ ಕಡೆಯವರು ಸೇರಿಕೊಂಡು ಹತ್ತಿರವಿದ್ದ ಪೇರಲ (ಜಾಫಲ್) ಮತ್ತು ಅತ್ತಿಗಿಡಕ್ಕೆ ಹಾಗೂ ಮಾವಿನಗಿಡಕ್ಕೆ ಪೂಜೆ ಮಾಡಿಸುತ್ತಾರೆ. ಪೂಜೆ ಮಾಡಿದ ಗಿಡದ ಟೊಂಗೆಗಳನ್ನು ಕತ್ತರಿಸಿಕೊಂಡು ಬರುತ್ತಾರೆ. ಆ ಟೊಂಗೆಗಳನ್ನು ಮದುವೆ ಮನೆಯ ಮುಂದೆ ಎರಡು ಪಕ್ಕ ಊರುತ್ತಾರೆ. ಈ ಗಿಡದ ಟೊಂಗೆಗಳನ್ನು ತಂದು ನೆಡುವವರೆಗೂ ಆ ಮನೆಯಲ್ಲಿ ಮದುವೆಯ ಕ್ರಿಯೆಗಳು ನಡೆಯುವುದಿಲ್ಲ. ಏಲಕ್ಕಿ ಗಿಡವನ್ನು ತಂದು ಹಂದರದ ಮುಂದೆ ನೆಡುತ್ತಾರೆ.

ಮದುವೆಗೆ ಬಂದ ಸಂಬಂಧಿಕರೂ ಒಂದೊಂದು ದಿನಕ್ಕೆ ಒಬ್ಬರಂತೆ ಏಳು ಜನ ಸೇರಿ ಏಳು ದಿನಗಳ ಕಾಲ ವಧು-ವರರಿಗೆ ೫ ಕೆಜಿ ಅರಿಷಿಣವನ್ನು ವಧು ವರರಿಗೆ ಹಚ್ಚುತ್ತಾರೆ. ಮೈ ತುಂಬಾ ಅರಿಷಿಣ ಹಚ್ಚಿ ಅವರನ್ನು ನಂತರ ಸ್ನಾನ ಮಾಡಿಸುತ್ತಾರೆ. ಇದೇ ವಿಧಾನದಲ್ಲಿ ಏಳು ದಿನಗಳ ಕಾಲ ಈ ಮದುವೆ ಜರುಗುತ್ತದೆ. ಹೀಗಾಗಿ ಏಳು ದಿನಗಳ ಕಾಲವು ಮಧುಮಕ್ಕಳಿಗೆ ಊಟಕ್ಕೆ ಅಕ್ಕಿ ಬೆಲ್ಲದಿಂದ ತಯಾರಿಸಿದ ಮಿಟ್ಟಾ ಅಂದರೆ ಸಿಹಿ ಪದಾರ್ಥಗಳನ್ನು ತಯಾರಿಸಿಕೊಡುತ್ತಾರೆ. ಆ ಏಳು ದಿನಗಳು ಮಾತ್ರ ಹಿರಿಯರು ಹೇಳಿದ ಹಾಗೇ ಅಥವಾ ಪೂಜಾರಿಗಳು ಹೇಳುವ ನಿಯಮದ ಪ್ರಕಾರವೇ ಮಧುಮಕ್ಕಳು ನಡೆದುಕೊಂಡು ಬರುತ್ತಾರೆ. 'ಮಿಟ್ಟಾ' ವನ್ನು ವಧು ವರರು ಕೂಡಿಯೇ ತಿನ್ನಬೇಕು. ಇತರರ ದೇಹದ ಭಾಗಕ್ಕೆ ಬಲವನ್ನು ಕೊಟ್ಟಂತಾಗುತ್ತದೆಂಬ ಕಾರಣದಿಂದ ಈ ಪದಾರ್ಥವನ್ನು ಕೊಡುತ್ತಾರೆ.

ನಡುಮನೆಯಲ್ಲಿ ಹೆಣ್ಣಿನ ಕಡೆಯವರು ಸೇರಿಕೊಂಡು ತಮಗೆ ಕೈಲಾದ ಮಟ್ಟಿಗೆ ಉಡುಗೊರೆಯನ್ನು ಕೊಡುತ್ತಾರೆ. ಇವರಲ್ಲಿ ಅಂತರ್ಜಾತಿ ವಿವಾಹಗಳು ಕಂಡು ಬರುವುದಿಲ್ಲ.

ಮದುವೆ ಕಾರ್ಯ ಮುಗಿಸಿದ ಪೂಜಾರಿ ಅಥವಾ ಪಂಚರು ಹಾಗೂ ಸಂಬಂಧಿಕರೆಲ್ಲಾ ಸೇರಿಕೊಂಡು ವಧು-ವರರನ್ನು ಕೂಡಿಸಿಕೊಂಡು ಮನೆಯಿಂದ ಪ್ರತ್ಯೇಕವಾಗಿರಲು ಸೂಚಿಸುತ್ತಾರೆ. ಅವರಿಗಾಗಿ ಒಂದು ಜೋಪಡಿ ತಯಾರಿಸಿ ಪ್ರತ್ಯೇಕ ವಾಗಿರಲು ಕಳುಹಿಸುತ್ತಾರೆ. ಅಂದಿನಿಂದ ಗಂಡ-ಹೆಂಡತಿ ಪ್ರತ್ಯೇಕವಾದ ಗುಡಿಸಲಿನಲ್ಲಿ ಸಂಸಾರ ಹೂಡುವರು.

ಸಾಮಾನ್ಯವಾಗಿ ವರ ಮದುವೆಯಾಗಿ ತನ್ನ ಮಾವನ ಮನೆಯ ಎದುರಿಗೆ ಗುಡಾರ ಹಾಕಿಕೊಂಡು ಹೆಂಡತಿಯನ್ನು ಕರೆದುಕೊಂಡು ಜೀವನ ನಿರ್ವಹಿಸ ಬೇಕಾಗುತ್ತದೆ. ಇದು ಸರಿ ಎನಿಸಿದರೆ ಎಲ್ಲರೂ ಖುಷಿಪಡುತ್ತಾರೆ. ಅಲ್ಲದೇ ಮದುವೆ ಮುಗಿಯುವವರೆಗೂ ಯಾವ ಸಿಕ್ಕಿಗರು ಮದ್ಯ ಮತ್ತು ಮಾಂಸವನ್ನು ಸೇವಿಸಬಾರದು. ಆ ರೀತಿ ಸೇವಿಸುವ ಸಿಕ್ಕಿಗರ ವ್ಯಕ್ತಿಯನ್ನು ಜಾತಿಯಿಂದ ನಿಷೇಧಿಸುತ್ತಾರೆ.

ವಿಧವಾ ವಿವಾಹ

ಸಿಕ್ಲಿಗರಲ್ಲಿ ವಿಧವಾ ವಿವಾಹ ಕಂಡುಬರುತ್ತದೆ. ಅಣ್ಣ ಸತ್ತರೆ ಅಣ್ಣನ ಹೆಂಡತಿಯನ್ನು ಮೈದುನನು ಮದುವೆಯಾಗುವುದು ಕಂಡುಬರುತ್ತದೆ. ಹೆಚ್ಚಾಗಿ ತಮ್ಮ ಮದುವೆಯಾಗದ ಪಕ್ಷದಲ್ಲಿ ಅತ್ತಿಗೆಯನ್ನು ಮದುವೆಯಾಗಲು ಅಡ್ಡಿಯಿಲ್ಲ. ಆದರೆ ನಲವತ್ತು ವರ್ಷದೊಳಗೆ ಅತ್ತಿಗೆ ಇದ್ದಾಗ ಮಾತ್ರ ಮದುವೆಯಾಗಬಹುದು. ನಲವತ್ತು ವರ್ಷಕ್ಕೆ ಮೇಲ್ಪಟ್ಟರೆ ಆಗಲು ಬರುವುದಿಲ್ಲವೆಂಬ ನಿರ್ಬಂಧನೆಯನ್ನು ಹಾಕಲಾಗಿದೆ. ಆದರೆ, ತಮ್ಮ ತೀರಿ ಹೋದರೆ ಆತನ ಹೆಂಡತಿಯನ್ನು ಅಣ್ಣನಾದವನು ಮದುವೆ ಮಾಡಿಕೊಳ್ಳಲು ಬರುವುದಿಲ್ಲ.



೫

# ಆರಾಧನೆ ಆಚರಣೆ ನಂಬಿಕೆ

## ಜನನ

ಪ್ರಾಚೀನ ಕಾಲದಿಂದಲೂ ಸಿಕ್ಲಿಗರ ಸಮುದಾಯ ಸರಳವಾಗಿಯೇ ನಡೆದುಕೊಂಡು ಬಂದಿದೆ. ಸೀಮಂತ ಕಾರ್ಯ ಮಾಡಿದ ಹಾಗೇ ಸಿಕ್ಲಿಗರರು ತಮ್ಮಲ್ಲಿ ಗರ್ಭಧರಿಸಿದ ಯುವತಿಗೆ 'ಗೋದಭರ' (ಕುಬುಸ)ದ ಕಾರ್ಯಕ್ರಮವನ್ನು ಮಾಡುವರು. ಆಗ ಜನನ ಸಂಬಂಧಿ ನಂಬಿಕೆಗಳು ಮತ್ತು ಆಚರಣೆಗಳ ಪ್ರಕಾರ ಸಿಕ್ಲಿಗರರ ಯುವತಿ ಗರ್ಭಿಣಿಯಾದ ಮೂರು ತಿಂಗಳಿಗೆ ಗೋದಭರಿ (ಸೀಮಂತ) ಕಾರ್ಯಕ್ರಮ ಕೈಗೊಳ್ಳುವರು. ಈ ಕಾರ್ಯಕ್ರಮವು ಸಹ ಗಂಡನ ಮನೆಯಲ್ಲಿ ಜರುಗುತ್ತದೆ. ಆಗ ಗಂಡನ ಮನೆಯ ಹಾಗೂ ಸುತ್ತಲಿನ ಜನರನ್ನು ಅಲ್ಲದೇ ಯುವತಿಯ ತವರಿನ ಮನೆಯವರಿಗೆ ಕಾರ್ಯಕ್ರಮಗಳ ವಿಚಾರಗಳನ್ನು ತಿಳಿಸುವರು.

ಗರ್ಭಧರಿಸಿದ ಯುವತಿಯ ಕಡೆಗೆ ವಿಶೇಷವಾದ ಒಲವನ್ನು ಕೊಡುತ್ತಾರೆ. ಹೊಸ ಬಟ್ಟೆ ವಸ್ತ್ರಗಳನ್ನು ಕೊಡುತ್ತಾರೆ. ಹೆರಿಗೆಯಾಗುವ ಸಂದರ್ಭಗಳಲ್ಲಿ ಹಿರಿಯರಾದ ಹೆಣ್ಣುಮಕ್ಕಳು ಜೊತೆಗೆ ಇರುತ್ತಾರೆ. ದಾದಿಯರು (ಸೂಲಗಿತ್ತಿಯರು) ಜೊತೆಗೆ ಇರುತ್ತಾರೆ. ಆ ಸಂದರ್ಭದಲ್ಲಿ ಗಂಡಿಗೆ ಪ್ರವೇಶ ನೀಡುವುದಿಲ್ಲ. ಮಗುವಿನ ಜನನವಾದ ಕೂಡಲೇ ಸೂಲಗಿತ್ತಿ ಮಗುವಿನ ಹೊಕ್ಕಳ ಹುರಿಯನ್ನು ಕುಡುಗೋಲಿನಿಂದ ಕತ್ತರಿಸುತ್ತಾಳೆ. ಮಗುವಿಗೂ ತಾಯಿಗೂ ಸ್ನಾನ ಮಾಡಿಸುತ್ತಾರೆ. ಅಗ್ಗಸ್ಟಿಕೆ(ಬೆಂಕಿ) ಹಾಕುವರು. ಮಗು ಹಾಗೂ ಬಾಣಂತಿಯನ್ನು ಕೂಡಲೇ ಸ್ನಾನ ಮಾಡಿಸಿ ಹೊರ ಬಂದ ಮೇಲೆ ಆಕೆಗೆ ಸಿಹಿ ತಿಂಡಿ ತಿನಿಸುವರು. ಕನಿಷ್ಟ ಸುಮಾರು ನಲವತ್ತೈದು ದಿನಗಳವರೆಗೆ ಬೆಲ್ಲದ ಆಹಾರವನ್ನು ನಿರಂತರವಾಗಿ ತಿನಿಸುತ್ತಾರೆ. ಬಾಣಂತಿಗೆ ವಿಶ್ರಾಂತಿ ಕೊಡಿಸುತ್ತಾರೆ. ಎಲೆ-ಅಡಿಕೆಯನ್ನು ಹಾಕಿಸುತ್ತಾರೆ. ಗೋಧಿ ಬೆಲ್ಲದಲ್ಲಿಯೇ ಹಲವು ರೀತಿಯ ತಿನಿಸುಗಳನ್ನು ತಯಾರಿಸಿ ಕೊಡುವರು. ಹೆಂಗಸು ಗರ್ಭಿಣಿ ಆದಾಗಿನಿಂದಲೂ ಏನಾದರೊಂದು ಕೆಲಸ ಕಾರ್ಯಗಳನ್ನು ಮಾಡುತ್ತಿರಬೇಕು. ಇದು ಹೆರಿಗೆಗೆ ಅನುಕೂಲವಾಗುತ್ತದೆಂದು ಎಚ್ಚರವಹಿಸುತ್ತಿದ್ದರು. ಇದರಂತೆ ಮಗು ಜನಿಸಿದಾಗ ಸಹಜವಾಗಿ ನಲವತ್ತೈದು ದಿನಗಳ ಕಾಲ ಅಡಿಗೆ ಸಾಮಾನುಗಳನ್ನು ಮತ್ತು ಯಾವುದೇ ವಸ್ತು ಸಹ ಮುಟ್ಟಲು ಹೋಗುವುದಿಲ್ಲ.

ಗರ್ಭವತಿಯಾದ ಹೆಣ್ಣುಮಗಳು ಗಂಡನ ಮನೆಯಲ್ಲಿ ಗೋದಭರಿ ಕೈಗೊಂಡು ಅಲ್ಲಿಯೇ ಮಗುವಿಗೆ ಜನನ ನೀಡುವಳು. ಮಗುವಿಗೆ ಕೆಟ್ಟ ದೃಷ್ಟಿ ಬೀರಬಾರದೆಂದು ತಮ್ಮದೇಯಾದ ಕೆಲವು ಸಂಪ್ರದಾಯಾಚರಣೆಗಳನ್ನು ಕೈಗೊಂಡಿದ್ದಾರೆ. ಮಗುವಿಗೆ ಕೈಗಡಗ ಮಣಿಗಳನ್ನು ಕಟ್ಟುತ್ತಾರೆ. ಆ ಮೂಲಕ ತಮ್ಮ ಭಯ ಹಾಗೂ ಅನುಮಾನವನ್ನು ದೂರಿಕರಿಸುತ್ತಾರೆ.

**ಮಗುವಿನ ನಾಮಕರಣ**

ಸಿಕ್ಲಿಗರರ ಮಗುವಿಗೆ ನಾಮಕರಣ ಮಾಡುವಾಗ ಯಾವುದೇ ಕಾರ್ಯಗಳು ವಿಶೇಷ ವಾಗಿ ನಡೆಯುವುದಿಲ್ಲ. ಸಿಖ್‌ರ ಪ್ರಕಾರವಾಗಿಯೇ ಇವರ ಆಚರಣೆಗಳು ನಡೆಯುತ್ತವೆ. ಮಗು ಹುಟ್ಟಿದ ನಂತರ ಗುರುದ್ವಾರಕ್ಕೆ ಹೋಗುತ್ತಾರೆ. ಅಲ್ಲಿಯೇ ಹಲವು ಜನರು ಸೇರಿಕೊಂಡು ಗುರುಗ್ರಂಥ ಸಾಹೇಬ ಓದಿಸಿ ಗುರುಗ್ರಂಥ ಪಠಣದ ಮೂಲಕ ಬರುವ ಹೆಸರನ್ನೇ ಮಗುವಿಗೆ ನಾಮಕರಣ ಮಾಡುತ್ತಾರೆ. ಸಿಕ್ಲಿಗರರು ಪುರುಷ ಪ್ರಧಾನವಾದ ಸಂಸ್ಕೃತಿಯನ್ನು ಹೊಂದಿದ್ದರಿಂದ ಗಂಡು ಮಗುವಿಗೆ ಹೆಚ್ಚಿನ ಆದ್ಯತೆ ನೀಡುತ್ತಾ ಬಂದಿದ್ದಾರೆ. ಇಂದಿಗೂ ಆ ಕಾರ್ಯವನ್ನು ಚಾಚೂ ತಪ್ಪದೇ ಮುಂದುವರೆಸಿಕೊಂಡು ಬರುತ್ತಿದ್ದಾರೆ.

ಸಿಕ್ಲಿಗರರು ಅಲೆಮಾರಿಗಳಾಗಿದ್ದರಿಂದ ಗಂಡನ ಮನೆಯಲ್ಲಿಯೇ ಮಗುವಿಗೆ ಸಂಬಂಧಿಸಿದ ಎಲ್ಲಾ ಸಂಸ್ಕಾರಗಳನ್ನು ನಡೆಸುವರು. ಏಕೆಂದರೆ ಹೆಣ್ಣಿನ ತವರು ಮನೆಯವರು ಮಗು ಹುಟ್ಟುವ ಸಂದರ್ಭದಲ್ಲಿ ಎಲ್ಲಿ ಇರುವರೆಂದು ತಿಳಿದು ಬರುವುದಿಲ್ಲ. ಅಲೆಮಾರಿ ಜೀವನದಿಂದ ಎಲ್ಲೋ ಹೋಗಿ ಕಾಲ ಕಳೆಯುತ್ತಾರೆ. ಹೀಗಾಗಿ ಬೇಗನೇ ತವರು ಮನೆಗೆ ಕಳುಹಿಸಲು ಅಸಾಧ್ಯವಾಗುವುದೆಂಬ ಕಾರಣದಿಂದ ಗಂಡನ ಮನೆಯಲ್ಲಿಯೇ ಮಗುವಿನ ಜನನ, ನಾಮಕರಣ ಕಾರ್ಯಕ್ರಮಗಳು ನಡೆಯುತ್ತವೆ. ಹೀಗಾಗಿ ತಂದೆಯ ಮನೆಯಲ್ಲಿಯೇ ಮಗುವಿನ ಲಾಲನೆ ಪಾಲನೆ ಪೋಷಣೆ ಜರುಗುತ್ತವೆ.

**ಋತುಮತಿ**

ಋತುಮತಿಯಾದ ಹೆಣ್ಣನ್ನು ಮೂಲೆಯಲ್ಲಿ ಕೂಡಿಸುವರು. ಯಾವ ಒಬ್ಬ ವ್ಯಕ್ತಿಯೂ ಮುಟ್ಟುವುದಿಲ್ಲ. ಅವಳಿಗೆ ಅಡಿಗೆ ಮನೆಗೆ ಪ್ರವೇಶವಿಲ್ಲ. ಯಾವ ವಸ್ತುಗಳನ್ನು ಮುಟ್ಟಿಸುವುದಿಲ್ಲ. ತನ್ನ ಅಡಿಗೆಯನ್ನು ತಾನೇ ಮಾಡಿಕೊಂಡು ಕೆಲಸ ನಿರ್ವಹಿಸಬೇಕು. ಒಂದು ಕೆಜಿ ಗೋಧಿಗೆ ಎರಡು ಕೆಜಿ ಬೆಲ್ಲ, ಅಜಿವಾನ, ಡಾಲ್ಡಾ ಹಾಗೂ ಶುಂಠಿಯನ್ನು ಹಾಕಿ ಚೆನ್ನಾಗಿ ಅರೆದು ಕುಟ್ಟಿ ಮಾಡಿದ ವಿಶೇಷ 'ಹರಿದಾ' ಎಂಬ ಆಹಾರವನ್ನು ಒಂದು ತಿಂಗಳ ಹದಿನೈದು ದಿವಸಗಳ ಕಾಲ ಕೊಡುತ್ತಾರೆ. ಸಿಕ್ಲಿಗರರ ಹುಡುಗಿ ಕುಳಿತ ಮೂಲೆಯಲ್ಲಿ ಐದು ದಿನ ಹಾಗೇ ಕೂಡಬೇಕು. ನಂತರ ವಿಧಿ-ವಿಧಾನಗಳ ಮೂಲಕ ಆಕೆಗೆ ಋತುಮತಿ ಕಾರ್ಯವನ್ನು ಪೂರೈಸಿ ಸಂಭ್ರಮ ಪಡುತ್ತಾರೆ.

## ಮರಣ

ಸಿಕ್ಲಿಗರಲ್ಲಿ ಯಾರು ಸತ್ತರೂ ಹೂಳುವ ಪದ್ಧತಿ ಹೊಂದಿಲ್ಲ, ಬದಲಾಗಿ ಸುಡುವ ಪದ್ಧತಿಯನ್ನು ಅನುಸರಿಸಿಕೊಂಡು ಬಂದಿದ್ದಾರೆ. ತಾವು ಎಂದು ಕೂಡಾ ತಮ್ಮ ಜನನವಾದಾಗಿನಿಂದ ಹಿಡಿದು ಮರಣದತನಕವು ಕೂದಲನ್ನು ತೆಗೆಯುವುದಿಲ್ಲ. ಹೀಗಾಗಿ ಅವರು ಸಂಪೂರ್ಣ ತತ್ವದ ಮೇಲೆ ಬದ್ಧರಾಗಿ ಹಿರಿಯರ ಸಮ್ಮುಖ ಹಾಗೂ ಬಂಧು ಬಳಗದವರ ಮೂಲಕ ಸುಡುವ ಕಾರ್ಯಕೈಗೊಳ್ಳುವರು. ಸುಟ್ಟು ಹೋದ ದೇಹದ ಬೂದಿಯನ್ನು ತೆಗೆದುಕೊಂಡು ಮೂರುದಿನಗಳಲ್ಲಿ ಹತ್ತಿರದ ಹಳ್ಳ ಕೆರೆ ನದಿಗಳಲ್ಲಿ ಬಿಡುತ್ತಾರೆ. ಸತ್ತ ವ್ಯಕ್ತಿಯ ಮನೆಯಲ್ಲಿ ಮೂರು ದಿನಗಳು ಒಲೆಯನ್ನು ಹಚ್ಚುವುದಿಲ್ಲ. ನೆರೆಯ ಮನೆಯವರು ಸತ್ತವರ ಕುಟುಂಬಕ್ಕೆ ಊಟವನ್ನು ಕೊಡುತ್ತಾರೆ. ಮೂರು ದಿನದ ನಂತರ ಸ್ನಾನ ಮಾಡಿ ತರುವಾಯ ಅಡುಗೆ ಮಾಡುವರು. ಮೂರು ದಿವಸ ಇಲ್ಲವೇ ವಾರದಲ್ಲಿ ತಿಥಿಯನ್ನು ಮಾಡುತ್ತಾರೆ.

## ಶವಸಂಸ್ಕಾರ

ಶವವನ್ನು ತೊಳೆದು ನಂತರ ಪೂಜಿಸುತ್ತಾರೆ. ಶವವನ್ನು ಮಲಗಿಸಿಬಿಡುತ್ತಾರೆ. ಮೆರವಣಿಗೆಯ ಮೂಲಕ ಹೊರ ಸ್ಮಶಾನದತನಕ ಹೊತ್ತುಕೊಂಡು ಹೋಗುತ್ತಾರೆ. ಕಟ್ಟಿಗೆಯನ್ನು ಹಾಕಿ ಅದರ ಮೇಲೆ ಮಲಗಿಸಿ ಸುಡುತ್ತಾರೆ.

## ಧಾರ್ಮಿಕ ಆಚರಣೆಗಳು

ಧಾರ್ಮಿಕ ಆಚರಣೆಗಳ ಸಂದರ್ಭಗಳಲ್ಲಿ ಸಿಖ್‌ರು ಅನುಸರಿಸಿಕೊಂಡು ಬರುವ ಪದ್ಧತಿಗಳನ್ನು ಸಿಕ್ಲಿಗರು ಅನುಸರಿಸುತ್ತಲಿದ್ದಾರೆ. ಸಿಖ್‌ರಂತೆ ಗುರುದ್ವಾರಕ್ಕೆ ಹೋಗುತ್ತಾರೆ. ವರ್ಷದಲ್ಲಿ ಒಂದು ಬಾರಿ ಅಲ್ಲಿ ಕೂಡಿಕೊಂಡು ತಮ್ಮ ಕಷ್ಟ ಸುಖಗಳ ಬಗ್ಗೆ ದೇವರಲ್ಲಿ ನಿವೇದಿಸಿಕೊಳ್ಳುತ್ತಾರೆ. ಇವರಿಗೆ ಮುಖ್ಯವಾಗಿ ಕಾಣುವುದು ಗುರುನಾನಕ್ ಅವರ ಜಯಂತಿ. ತಲೆ ಬೋಳಿಸಿ ಗಡ್ಡ, ಮೀಸೆ ತೆಗೆಸಿಕೊಂಡರೆ ಸಿಖ್ಖ್ ಧರ್ಮದಿಂದ ಅಂತವರನ್ನು ಹೊರಹಾಕಲಾಗುತ್ತದೆ. ಇಂತಹ ಕಟ್ಟುಪಾಡು ಅವರಲ್ಲಿದೆ. ಅಂತಹ ಧಾರ್ಮಿಕ ಕಟ್ಟುಪಾಡುಗಳನ್ನು ಸಿಕ್ಲಿಗರು ಅನುಸರಿಸಿಕೊಂಡು ಬಂದಿದ್ದಾರೆ.

ಸಿಖ್‌ರಲ್ಲಿ ೫ 'ಕ' ಗಳನ್ನು ಹೊಂದಿದ್ದರೆ ಮಾತ್ರ ಆತ ಸಿಖ್ ಅಥವಾ ಸಿಕ್ಕಲಗಾರ್ ಆಗುತ್ತಾನೆ. ಇದರಲ್ಲಿ ಒಂದು ಇರದಿದ್ದರೂ ಸಿಖ್–ಸಿಕ್ಲಿಗರ ಆಗಿರಲಾರ. ೧೮ ಬೆಡಗುಗಳನ್ನು ಹೊಂದಿರಬೇಕು. ಗುರುಗೋವಿಂದ ಸಿಂಗ್, ಸಿಖ್ಖ್ ಸಮುದಾಯ ಸ್ಥಾಪಿಸಿದರು. ಧರ್ಮ ಕ್ರಾಂತಿಯಲ್ಲಿ ಪಾಲ್ಗೊಂಡವರಿಗೆ ಯುದ್ಧಕ್ಕೆ ಬೇಕಾದ ಕಬ್ಬಿಣದ ಆಯುಧಗಳನ್ನು ತಯಾರಿಸುವ ಸಿಖರಲ್ಲಿಯ ಗುಂಪೇ ಸಿಕ್ಲಿಗರರಾಗಿದ್ದಾರೆ. ಇವರಿಗೆ ಗುರುಗೋವಿಂದ ಸಿಂಗ್ ದೇವರಾಗಿದ್ದಾನೆ. ಧಾರ್ಮಿಕ ವಿಧಿಯ ಪ್ರಕಾರ ತಲೆಯಿಂದ ಪಾದದವರೆಗೆ ಬಳಸುವ ತೊಡುಗೆಯನ್ನು ಐದು 'ಕ' ಗಳಾಗಿರುತ್ತವೆ. ಈ ಐದು ಕ್ರಮೇಣವಾಗಿ ಇರಬೇಕು ಒಂದು ಇರದಿದ್ದರೂ ಅವರು ಸಿಕ್ಕಲಗಾರರಾಗುವುದಿಲ್ಲ. ಇಲ್ಲಿ ಕಚ್ಚೆ ಹೆಣ್ಣು–ಗಂಡಿಗೂ ಕೂಡಾ ಅನ್ವಯವಾಗುತ್ತದೆ. ಇದು ಧಾರ್ಮಿಕ ವಿಧಾನವಾಗಿದೆ.

ತನಗೆ ಸಂಬಂಧಿಸಿದ ಉಡುಗೆ ತೊಡಿಗೆಯಲ್ಲಿ ಧಾರ್ಮಿಕ ಕಟ್ಟಪ್ಪಣೆ ಪಾಲಿಸ ಬೇಕಾಗಿದೆ. ನೀಲಿ ಬಣ್ಣದ ವಸ್ತುಗಳನ್ನು ಬಳಸುತ್ತಾರೆ. ಹಸಿರು ಬಣ್ಣವನ್ನು ಇವರು ವಿರೋಧಿಸುವುದುಂಟು. ಏಕೆಂದರೆ ಹಸಿರು ಮುಸ್ಲಿಂರ ಸಂಕೇತ. ಇವರು ಮುಸ್ಲಿಂರ ದಾಳಿಗಳಿಂದಾಗಿ ತಮಗೆ ನೆಲೆಯೂರಲು ಸ್ಥಾನ ದೊರಕಿಲ್ಲ. ಹೀಗಾಗಿ ಅಲೆಮಾರಿ ಗಳಾಗಿದ್ದೇವೆಂಬ ಕಾರಣಕ್ಕಾಗಿ ಮುಸ್ಲಿಂರನ್ನು ವಿರೋಧಿಸುತ್ತಾರೆ. ಹಬ್ಬದ ವಿಶೇಷವಾದ ವಾತಾವರಣ ಸಿಖ್ಖರಲ್ಲಿ ಕಾಣಸಿಗುತ್ತವೆ. 'ಲಂಗಾರ್' ಎನ್ನುವ ವಿಶೇಷವಾದ ಹಬ್ಬವನ್ನು ಜಾತಿವರ್ಗ-ವರ್ಣಬೇಧ, ಲಿಂಗಬೇಧವಿಲ್ಲದೇ ಎಲ್ಲರೂ ಕೂಡಿಕೊಂಡು ಗುರುದ್ವಾರದಲ್ಲಿ ಆಚರಿಸುತ್ತಾರೆ. ಹೆಂಗಸರು ಚೂಡಿದಾರ ಉಡುತ್ತಾರೆ. ಗಂಡಸು ಸಾಮಾನ್ಯವಾದ ಬಟ್ಟೆಗಳನ್ನು ಧರಿಸುವರು. ಸಾಮಾನ್ಯವಾಗಿ ಪೈಜಾಮು ನಿಲುವಂಗಿಯನ್ನು ಬಡವರು ಉಡುತ್ತಾರೆ.

ಧಾರ್ಮಿಕ ಆಚರಣೆಗಳ ಹೊತ್ತಿನಲ್ಲಿ ಜಾತ್ರೆಗಳಲ್ಲಿ ಮತ್ತಿತರ ಧಾರ್ಮಿಕ ಕಾರ್ಯದಲ್ಲಿ ನೃತ್ಯ ಕಂಡು ಬರುತ್ತದೆ. ಅವುಗಳು ಆಚರಣಾ ಸಂಬಂಧಿ ನೃತ್ಯಗಳಾಗಿವೆ. ಈ ಸಂದರ್ಭ ದಲ್ಲಿ ಲಂಗಾರ್ ಎಂಬ ಊಟವನ್ನು ಹಾಕಿಸುತ್ತಾರೆ. ಸಿಖ್ಖ ಹಾಗೂ ಸಿಕ್ಲಿಗರ ಕೂಡಿಯೇ ಇದನ್ನು ಮಾಡುತ್ತಾರೆ. ಇಲ್ಲಿ ಯಾವ ತಾರತಮ್ಯಗಳು ಕಾಣಸಿಗುವುದಿಲ್ಲ. ಇವು ಕೂಡಿ ಮಾಡುವಂತಹ ಉತ್ಸವ. ಆದರೆ, ಮದುವೆ ಮುಂಜಿಗಳಲ್ಲಿ ಸಿಖ್ಖರು-ಸಿಕ್ಲಿಗರ ಹತ್ತಿರ ಬರುವುದಿಲ್ಲ. ಸಿಕ್ಲಿಗರು ಸರ್ವಚೇತನವಾದ ದೇವತೆಗಳನ್ನು ಹೊಂದಿದ್ದಾರೆ. ಹೆಣ್ಣು ದೇವತೆಯ ಆರಾಧನೆಯನ್ನು ಕೈಗೊಂಡಿದ್ದಾರೆ. ಧರ್ಮ ದೈವಗಳಾದ ಗುರುನಾನಕ್ ಹಾಗೂ ಗುರುಗೋವಿಂದ ಸಿಂಗ್‌ರನ್ನು ಮಾತ್ರ ಮನದಾಳದಲ್ಲಿ ಇಟ್ಟುಕೊಂಡಿದ್ದಾರೆ. ಅಲ್ಲಿಯೇ ಒಂದು ಟಿಣ್ ಜಾಗದಲ್ಲಿ ಅಥವಾ ಜೋಪಡಿಯಲ್ಲಿ ಗುರುದ್ವಾರ ಹಾಕಿಕೊಂಡು ತಮ್ಮ ಗ್ರಾಮದೈವವನ್ನು ಪೂಜಿಸುತ್ತಾರೆ.

**ಪುಣ್ಯಕ್ಷೇತ್ರಗಳು**

ಬುಡಕಟ್ಟುಗಳು ತಮ್ಮಲ್ಲಿಯೇ ನಿಸರ್ಗದ ಹಲವಾರು ದೇವಾನುದೇವತೆಗಳನ್ನು ಕಾಡು-ಬೆಟ್ಟ, ಗಿರಿ-ಶಿಖರಗಳಲ್ಲಿ ಕಂಡವರು ನಾಡಿನಲ್ಲಿಯೇ ಬಂದು ನೆಲೆಯೂರಿದ್ದರಿಂದ ತಮಗೆ ಅನುಕೂಲವಾದ ಯತ್ರಾಸ್ಥಳ ಪುಣ್ಯಕ್ಷೇತ್ರ ದೈವದ ಪವಾಡಗಳು ಹಾಗೂ ಪೂಜಾವಿಧಾನವನ್ನು ಅನುಸರಿಸಿಕೊಂಡು ಬರುತ್ತಲಿದ್ದಾರೆ. ಪಂಜಾಬ ಸಿಖ್‌ರಿಗೆ ಪವಿತ್ರವಾದಂತೆ ಈ ಸಿಕ್ಲಿಗರಿಗೂ ಪವಿತ್ರವಾದ ಪುಣ್ಯಕ್ಷೇತ್ರವಾಗಿದೆ. ಮೊದಲ ಸ್ಥಾನವನ್ನು ಇದಕ್ಕೆ ನೀಡಿದ್ದಾರೆ. ಜೊತೆಗೆ ನಾಂದೇಡ, ಬೀದರ್, ತುಳಜಾಪುರ, ಕೊಲ್ಹಾಪುರ ಕ್ಷೇತ್ರಗಳಲ್ಲಿಯ ಗುರುದ್ವಾರಗಳಿಗೆ ದರ್ಶನ ನೀಡುತ್ತಾರೆ.

ನಾಂದೇಡದಲ್ಲಿ ಗುರುಗೋವಿಂದ ಸಿಂಗ್‌ರ ಸಮಾಧಿಸ್ಥಳ ಇರುವುದರಿಂದ ಸಿಕ್ಲಿಗರಿಗೆ ನಾದೇಂಡ ಪ್ರಮುಖ ಹತ್ತಿರದ ಪುಣ್ಯಕ್ಷೇತ್ರವಾಗಿದೆ. ಬೀದರ್ ಗುರುನಾನಕ್ ಝರಿಯಲ್ಲಿ ಹಾಗೂ ಗುರುದ್ವಾರದಲ್ಲಿ ಲಂಗಾರ್ ಆಚರಣೆ ಗುರು ಗ್ರಂಥಸಾಹೇಬದ ಪಠಣವನ್ನು ಯಾವ ಕಾಲಕ್ಕೂ ಬಿಡದೇ ಪಠಣ ಮಾಡುತ್ತಾರೆ. ಗುರುನಾನಕ್ ಜಯಂತಿ ಗೋಕುಲಾ ಷ್ಟಮಿ, ದಸರಾ, ಜಾತ್ರೆ ಉತ್ಸವಗಳಲ್ಲಿ ಪಾಲ್ಗೊಳ್ಳುವರು.

**ದೈವಸಂಬಂಧಿ ಪವಿತ್ರ ದಿನ**

ಗೋಕುಲಾಷ್ಟಮಿ ದಿನ ಸಿಕ್ಲಿಗರ ಹೆಣ್ಣುಮಕ್ಕಳು ಒಂದು ರಾತ್ರಿ ಒಂದು ಹಗಲು ಉಪವಾಸವಿದ್ದು ಶ್ರೀಕೃಷ್ಣದೇವರಿಗೆ ನೈವೇದ್ಯ ಅರ್ಪಿಸುವರು. ಹಾವಿನ ಹುತ್ತಿಗೆ ಹಾಲನ್ನು ಹಾಕುತ್ತಾರೆ. ಇದು ಹೆಣ್ಣುಮಕ್ಕಳಾದ ಸಿಕ್ಲಿಗರ ವಿಶೇಷವಾದ ಹಬ್ಬ, ಇದಕ್ಕೆ ಸಿಕ್ಲಿಗರು ನವಮಿ ಎಂದು ಕರೆಯುತ್ತಾರೆ.

**ಬಲಿ ಆಚರಣೆ**

ಬುಡಕಟ್ಟು ಸಮುದಾಯಗಳು ಬಲಿ ಆಚರಣೆಯಲ್ಲಿ ಸಿದ್ಧಹಸ್ತರು. ಯುಗಾದಿಯ ಮಾರನೇ ದಿನ ಅಂದರೆ ಯುಗಾದಿಯಾಗಿ ಮೊದಲು ಬರುವ ಸೋಮವಾರದಂದು ಹಂದಿ ಬಲಿ ಕೊಟ್ಟು ಪೂಜೆ ಮಾಡುತ್ತಾರೆ. ಇಲ್ಲಿ ಪೂಜೆಗಾಗಿ ಕುರಿಬಲಿ ನೈವೇಧ್ಯವನ್ನು ಅರ್ಪಿಸುವರು. ಇದರಲ್ಲಿ ಅನ್ನ, ಚೆನ್ನಂಗಿ ಬೇಳೆ, ಹಳದಿ (ಅರಿಶಿಣ) ಗೋಧಿ ಬಳಸಿದ ಊಟವನ್ನು ಧಾರ್ಮಿಕವಾಗಿ ನಿಷೇಧಿಸುತ್ತಾರೆ.

ಸಿಕ್ಲಿಗರು ಪ್ರಾದೇಶಿಕವಾಗಿ ಹಾಗೂ ವರ್ಷಾಚರಣೆಯಲ್ಲಿ ಬರುವ ಹಿಂದೂಗಳ ಹಬ್ಬದಲ್ಲಿ ಪಾಲ್ಗೊಳ್ಳುತ್ತಾರೆ. ಇದು ಇವರ ಭಾವೈಕ್ಯತೆ ಹಾಗೂ ಸರ್ವಧರ್ಮ ಸಹಿಷ್ಣುತೆಯ ಪ್ರತೀಕ ದಸರಾ, ದೀಪಾವಳಿ, ರಕ್ಷಾಬಂಧನ, ಗೋಕುಲಾಷ್ಟಮಿ, ನವರಾತ್ರಿ, ಹೋಳಿಹಬ್ಬ, ನಾಗರ ಪಂಚಮಿ, ಮುಂತಾದ ಹಬ್ಬಗಳನ್ನು ಮಾಡುತ್ತಾರೆ.

**ಲಂಗಾರು ಉತ್ಸವ**

ಸಿಖ್‌ರ ಗುರುವಾದ ಗುರುನಾನಕ್ ಜಯಂತಿ ದಿನದಂದು 'ಲಂಗಾರು' ಉತ್ಸವ ಮಾಡುತ್ತಾರೆ. ಲಂಗಾರು, ಎಂಬುದು ಹರಕೆಯ ಪದ್ಧತಿ. ಸಿಕ್ಲಿಗರು ಹಾಗೂ ಸಿಖ್ಖರ ಪ್ರಮುಖ ಹಬ್ಬಗಳಾಗಿವೆ. ಗುರುದ್ವಾರದಲ್ಲಿ ಊಟ ಹಾಕಿ ಎಲ್ಲರೂ ಕೂಡಿಯೇ ಸಹಪಂಕ್ತಿಯಲ್ಲಿ ಭೋಜನ ಕೈಗೊಳ್ಳುತ್ತಾರೆ. ತಮ್ಮಲ್ಲಿಯ ಹಿರಿಯರನ್ನು ಪಂಚಮರೆಂದು ಕರೆಯುತ್ತಾರೆ. ಅವರಲ್ಲಿ ಇಬ್ಬರನ್ನು ಪೂಜಾರಿಗಳೆಂದು ಬಗೆದು ಲಂಗಾರ ಸಂದರ್ಭದಲ್ಲಿ ಅವರು ಹಾಗೂ ಜನಸಮುದಾಯಗಳೆಲ್ಲರೂ ಸೇರಿಕೊಂಡು ಕಾರ್ಯ ನಿರ್ವಹಿಸುತ್ತಾರೆ. ತಾವೇ ಸ್ವತಃ ಹೆಣ್ಣು ಗಂಡುಗಳು ಕೂಡಿಕೊಂಡು ಈ ಊಟವನ್ನು ತಯಾರಿಸಿ ಬಡಿಸುತ್ತಾರೆ. ಗಂಡಸರೂ ಹಾಗೂ ಹೆಂಗಸರು ಕೂಡಿಕೊಂಡು ಸಿಖ್ಖರು ಹಾಗೂ ಸಿಕ್ಲಿಗರು ಸಮಾನವಾಗಿ ಸೇರಿಕೊಂಡು ಲಂಗಾರದಲ್ಲಿ ಭಾಗವಹಿಸುತ್ತಾರೆ. ಇದರ ಅಡುಗೆಯನ್ನು ಸಿಖ್ಖರು ಹಾಗೂ ಸಿಕ್ಲಿಗರ ಸಮುದಾಯದ ಹೆಣ್ಣುಮಕ್ಕಳು ಸೇರಿಕೊಂಡು ಮಾಡುತ್ತಾರೆ.

# ೬

# ಒಳಾಡಳಿತ ವ್ಯವಸ್ಥೆ

ಪ್ರತಿಯೊಂದು ಬುಡಕಟ್ಟುಗಳಲ್ಲಿ ಆಡಳಿತ ನ್ಯಾಯ ಪದ್ಧತಿಗಳು ಗಟ್ಟಿ ನೆಲೆಯಾಗಿವೆ. ಬುಡಕಟ್ಟು ಸಮುದಾಯಗಳಲ್ಲಿ ಒಬ್ಬ ಮುಖ್ಯಸ್ಥನಿರುತ್ತಾನೆ. ಅವನ ನಿರ್ಣಯ ಅಂತಿಮ. ಮುಖ್ಯಸ್ಥನೇ ನೇರವಾಗಿ ತನ್ನ ಸಮುದಾಯದ ಮೇಲೆ ಸಂಪೂರ್ಣ ನಿಯಂತ್ರಣ ಹೊಂದಿರುತ್ತಾನೆ. ಆ ನಿಯಂತ್ರಣದ ಮೂಲಕ ತನ್ನ ಸಮುದಾಯದ ಅನನ್ಯತೆಯನ್ನು ಎತ್ತಿ ತೋರಿಸಲು ಸಾಧ್ಯವಾಗುತ್ತದೆ. ತಪ್ಪು ಮಾಡಿದವರನ್ನು ಕುರಿತು ಅನೇಕ ಕಠಿಣ ಶಿಕ್ಷೆ, ದಂಡ, ಬಹಿಷ್ಕಾರಗಳಂತಹ ಶಿಕ್ಷೆ ವಿಧಿಸುವ ವಾಡಿಕೆಯುಂಟು. ಅದಕ್ಕೆ ಮುಖ್ಯಸ್ಥ ಅಥವಾ ಆ ಸಮುದಾಯದ ನಾಯಕನ ತೀರ್ಮಾನ ಅಂತಿಮ. ಇಂತಹ ಒಳಾಡಳಿತ ವ್ಯವಸ್ಥೆ ಸಿಕ್ಲಿಗರಲ್ಲಿಯೂ ಇದೆ.

### ಒಳಾಡಳಿತ ಪದ್ಧತಿ

ಸಿಕ್ಲಿಗರ ಸಮುದಾಯವು ಪುರುಷ ಪ್ರಧಾನವಾದ ಸಮುದಾಯವಾಗಿದೆ. ಸಿಕ್ಲಿಗರು ತುಂಬಾ ಸ್ವಾಭಿಮಾನವುಳ್ಳವರು ಯಾರ ಹತ್ತಿರವೂ ಭಿಕ್ಷೆ ಬೇಡುವ ಕೆಲಸವನ್ನು ಎಂದೂ ಕೈಗೊಂಡಿಲ್ಲ. ಹೆಂಗಸರು ಯಾವ ಕೆಲಸವನ್ನು ಮಾಡಬಾರದು, ಮಾಡಿದರೆ ತಮ್ಮ ವೃತ್ತಿ ಹಾಗೂ ಗಂಡಸತನಕ್ಕೆ ದಕ್ಕೆ ಬರುವುದೆಂದು ಭಾವಿಸಿಕೊಂಡ ಸ್ವಾಭಿಮಾನಿಗಳು. ಹೆಂಗಸರಿಗೆ ಯಾವುದೇ ಸ್ಥಾನಮಾನ ನೀಡದಿದ್ದರೂ ಕೂಡಾ ಅವರು ನಮ್ಮಂತೆ ಮನುಷ್ಯರೆಂದು ಭಾವಿಸಿ ಪ್ರೀತಿ-ಸೌಜನ್ಯ, ವಾತ್ಸಲ್ಯದಿಂದ ನೋಡಿಕೊಳ್ಳುತ್ತಾರೆ. ಮನೆಗೆಲಸವನ್ನು ಮಾತ್ರ ಹೆಂಗಸರು ಮಾಡಬೇಕು. ಉಳಿದ್ಯಾವ ಕೆಲಸಗಳನ್ನು ಅವರಿಗೆ ಹಚ್ಚುವ ಪ್ರವೃತ್ತಿ ಇವರಲಿಲ್ಲ.

### ವಿವಾಹ ವಿಚ್ಛೇದನ

ಸಿಕ್ಲಿಗರಲ್ಲಿ ತಮಗೆ ಇಷ್ಟವಿರದಾಗ ಗಂಡ ಹೆಂಡತಿಯನ್ನು ಹಾಗೂ ಹೆಂಡತಿ ಗಂಡನನ್ನು ಬಿಡುವ ಸ್ವಾತಂತ್ರ್ಯವಿದೆ. ಆದರೆ ವಿವಾಹ ವಿಚ್ಛೇದನ ಹೊಂದಲು ಕೆಲವು ಕಾರಣಗಳಿರಬೇಕು. ಅಂತಹ ಕಾರಣಗಳು ಇದ್ದಾಗ ಮಾತ್ರ ವಿವಾಹ ವಿಚ್ಛೇದನಕ್ಕೆ ಆಸ್ಪದವಿದೆ. ಅವು ಈ ಕೆಳಗಿನಂತಿವೆ.

೧. ಮಕ್ಕಳು ಆಗದೇ ಇದ್ದಾಗ ಗಂಡ-ಹೆಂಡತಿ ಯಾರಾದರೂ ವಿಚ್ಛೇದನ

ಕೊಡಬಹುದು.

೨. ಗಂಡ–ಹೆಂಡತಿ ಮಧ್ಯ ಹೊಂದಾಣಿಕೆ ಇಲ್ಲದಿದ್ದಾಗ

೩. ಗಂಡ–ಹೆಂಡತಿಯರಲ್ಲಿ ಯಾರಾದರೊಬ್ಬರು ಅನೈತಿಕ ಸಂಬಂಧ ಹೊಂದಿದ್ದಾಗ

೪. ಗಂಡ ಅಥವಾ ಹೆಂಡತಿ ಹುಚ್ಚರಾಗಿದ್ದರೆ, ಅಂಗವಿಕಲತೆ ಇದ್ದರೆ ಮುಂತಾದ ಕಾರಣಗಳು ಇದ್ದಾಗ ಮಾತ್ರ ವಿವಾಹ ವಿಚ್ಛೇದನ ಮಾಡಲು ಮಾನ್ಯತೆ ದೊರೆಯುತ್ತದೆ.

ಈ ಎಲ್ಲಾ ಕಾರಣಗಳನ್ನು ನ್ಯಾಯಪಂಚಾಯ್ತಿಗಳಲ್ಲಿ ನಿರ್ಣಯ ಕೈಗೊಳ್ಳಬೇಕಾಗುತ್ತದೆ. ಪಂಚಾಯ್ತಿಯಲ್ಲಿ ನ್ಯಾಯ–ಅನ್ಯಾಯಗಳ ಪರಾಮರ್ಶನವನ್ನು ಹಿರಿಯರು ಮಾಡುತ್ತಾರೆ. ಅವರು ಒಪ್ಪಿಕೊಂಡು ಹೇಳಿದರೆ ಮಾತ್ರ ವಿಚ್ಛೇಧನ ನಡೆಯುತ್ತದೆ.

**ವಿವಾಹ ಪೂರ್ವ ಒಳ–ಹೊರಗು ರೀತಿ**

ಸಿಕ್ಲಿಗರು ಅಲೆಮಾರಿ ಜೀವನವನ್ನು ನಡೆಸಿಕೊಂಡು ಬಂದ ಸಮುದಾಯ. ಅವರಲ್ಲಿ ಯಾರೇ ತಪ್ಪು ಮಾಡಲಿ ಅವರಿಗೆ ಶಿಕ್ಷೆ ಇದೆ. ಹೀಗಾಗಿ ವಿವಾಹಕ್ಕಿಂತ ಮೊದಲೇ ಲೈಂಗಿಕ ಸಂಪರ್ಕಕ್ಕೆ ಅವಕಾಶ ನೀಡುವುದಿಲ್ಲ. ವಿವಾಹಪೂರ್ವದ ಲೈಂಗಿಕ ಸಂಪರ್ಕಕ್ಕೆ ಇವರು ನಿಷೇಧಿಸುತ್ತಾರೆ. ಒಂದು ವೇಳೆ ವಿವಾಹಕ್ಕಿಂತ ಪೂರ್ವದಲ್ಲಿ ಲೈಂಗಿಕತೆಗೆ ಒಳಗಾದರೆ ಅಥವಾ ಸಿಕ್ಕಿಬಿದ್ದ ಹೆಣ್ಣುಗಂಡು ಯಾರೇ ಆಗಲಿ ಅವರನ್ನು ಕೂಡಲೇ ತಮ್ಮ ಸಮುದಾಯದಿಂದ ಹೊರಹಾಕುತ್ತಾರೆ.

ಗಂಡ ಹೆಂಡತಿಯ ಮೇಲೆ ಕೈ ಎತ್ತಬಹುದು. ಆದರೆ ಹೆಂಡತಿಯು ಮಾತ್ರ ಕೈ ಎತ್ತುವ ಹಾಗಿಲ್ಲ. ಹಾಗೇನಾದರೂ ಮಾಡಿದರೆ ಆಕೆಯನ್ನು ಕುಲದಿಂದ ಹೊರಹಾಕಲಾಗುತ್ತದೆ.

ಸಿಕ್ಲಿಗರರ ಗಂಡಸರು ತಮ್ಮ ಜೀವನದಲ್ಲಿ ಒಂದೇ ಒಂದು ಸಾರಿ ತನ್ನ ಅಕ್ಕ ತಂಗಿ, ಚಿಕ್ಕಮ್ಮ ದೊಡ್ಡಮ್ಮ, ಅತ್ತೆ ಅತ್ತಿಗೆಯಂತಹ ಸಂಬಂಧದಲ್ಲಿ ಲೈಂಗಿಕ ಕ್ರಿಯೆಗೆ ತೊಡಗಿಕೊಂಡಿದ್ದರೆ ದಂಡನೆಗೆ ಗುರಿಪಡಿಸಲಾಗುತ್ತದೆ.

ಹೆಂಡತಿ ಮಗುವನ್ನು ಹೇರುವ ಮೂರು ತಿಂಗಳು ಮೊದಲು ಹಾಗೂ ಬಾಣಂತಿಯಾದ ಮೂರು ತಿಂಗಳ ಅನಂತರ ಆಕೆಯೊಂದಿಗೆ ಯಾವುದೇ ರೀತಿಯಲ್ಲಿ ಸಂಭೋಗಕ್ಕೆ ಅವಕಾಶವನ್ನು ನೀಡುವುದಿಲ್ಲ. ಹಾಗೇನಾದರು ಮಾಡಿದರೆ ಅಂಥವರಿಗೆ ಶಿಕ್ಷೆ ವಿಧಿಸಲಾಗುತ್ತದೆ.

ಹೆಂಗಸರು ತಿಂಗಳ ರಕ್ತಸ್ರಾವ (ಮುಟ್ಟಾದಾಗ) ವಾದಾಗ ಮೂರು ದಿವಸಗಳ ಕಾಲ ಗಂಡಸರು ಮುಟ್ಟುವಂತಿಲ್ಲ. ಆಕೆಯೊಂದಿಗೆ ಲೈಂಗಿಕ ಸಂಭೋಗ ಕ್ರಿಯೆಗೆ ತೊಡಗಿಕೊಳ್ಳಲೇಬಾರದು ಎಂಬ ನಿಯಮವನ್ನು ಹಾಕಿಕೊಂಡಿದ್ದಾರೆ. ಇದನ್ನು ತಪ್ಪಿ ನಡೆದರೆ ತಮ್ಮ ಗುರುವಿನ ಚೌಕಟ್ಟನ್ನು ಮುರಿದಂತಾಗುತ್ತದೆ ಎಂಬ ನಂಬಿಕೆ ಇದೆ. ಅಕಸ್ಮಾತ್ ಆ ರೀತಿ ನಡೆದುಕೊಂಡರೆ ಅಂಥವರಿಗೆ ಶಿಕ್ಷೆ ವಿಧಿಸುವ ಅಧಿಕಾರ ಹಿರಿಯರಿಗಿದೆ.

ಬೇರೆಯವರ ಹೆಂಡತಿಯನ್ನು ಅಪಹರಿಸಿಕೊಂಡು ಹೋದರೆ ಆತನಿಗೆ ಶಿಕ್ಷೆ

ವಿಧಿಸುವರು. ಆಕೆಯನ್ನು ಕೂಡಾ ಹಾಗೇ ಬಿಡದೇ ಆಕೆಗೂ ಶಿಕ್ಷೆಯನ್ನು ನೀಡಲಾಗುವುದು.

ಲಗ್ನಕ್ಕಿಂತ ಮುಂಚೆ ಅನೈತಿಕತೆಯನ್ನು ಹೆಂಗಸು ಹೊಂದಿದ್ದರೆ ಆಕೆಯನ್ನು ಪರೀಕ್ಷಿಸಲಾಗುತ್ತದೆ. ಆಕೆಯನ್ನು ಯಾರೂ ಲಗ್ನವಾಗದ ಹಾಗೇ ನೋಡಿಕೊಳ್ಳುತ್ತಾರೆ. ಅಂತಹ ಗಂಡಸಿಗೂ ಕೂಡಾ ಹೆಣ್ಣನ್ನು ಯಾರೂ ಕೊಡುವುದಿಲ್ಲ. ಒಂದು ವೇಳೆ ಅವರು ನಿಯಮದ ಪ್ರಕಾರ ಅನೈತಿಕತೆ ಹೊಂದಿದ್ದರೆ ಇವರಿಬ್ಬರಿಗೂ ಮದುವೆ ಮಾಡಿಸುತ್ತಾರೆ.



## ೭

# ಆರ್ಥಿಕ ಜೀವನ

ಮೂಲತಃ ಪಂಜಾಬ್ ಮೂಲದ ಕಬ್ಬಿಣದ ಕೆಲಸವನ್ನು ಮಾಡುವ ಅಲೆಮಾರಿ ಸಮುದಾಯವೇ ಸಿಕ್ಲಿಗರು. ಪಂಜಾಬದ ರಾಜಾ ರಣಜಿತ್‌ಸಿಂಗ (೧೭೮೨-೧೮೦೩)ರ ಆಡಳಿತದಲ್ಲಿ ಶಸ್ತ್ರಾಸ್ತ್ರಗಳನ್ನು ಮಾಡುವ, ಅವುಗಳಿಗೆ ಸಾಣೆ ಹಿಡಿಯುವ ಕೆಲಸಗಳಲ್ಲಿ ಇವರು ತೊಡಗಿದವರು. ರಾಜಾ ರಣಜಿತ್‌ಸಿಂಗ್ ಹಾಗೂ ಹೈದ್ರಾಬಾದ್ ಸಂಸ್ಥಾನ ದಲ್ಲಿಯ ನಿಜಾಮ ಅಲಿಖಾನ್ ಬಹದ್ದೂರ್(೧೭೬೩-೧೮೦೩) ಇವರಿಬ್ಬರಲ್ಲಿಯ ಸ್ನೇಹ ಬಾಂಧವ್ಯ ಸಹಕಾರಿಯಾಗಿತ್ತು. ನಿಜಾಮನಿಗೆ ಸೈನಿಕರ ಅಭಾವ ಕಂಡು ಬಂದಾಗ ರಾಜಾ ರಣಜಿತ್‌ಸಿಂಗ್ ತನ್ನಲ್ಲಿದ್ದ ಅತ್ಯಂತ ಪ್ರಾಮಾಣಿಕ, ಸತ್ಯನಿಷ್ಠ, ವೀರ, ಶೂರ, ಧೈರ್ಯಶಾಲಿ ಸಿಕ್ಲಿಗರ ಸೈನ್ಯದ ತುಕಡಿಯನ್ನು ಕಳುಹಿಸುತ್ತಿದ್ದರು ನಿಜಾಮನ ಹೈದ್ರಾಬಾದ್ ಸಂಸ್ಥಾನದಲ್ಲಿ ಸಿಕ್ಲಿಗರನ್ನು ಕಬ್ಬಿಣದ ಶಸ್ತ್ರಾಸ್ತ್ರಗಳನ್ನು ತಯಾರಿಸಲು, ಸೈನ್ಯದೊಳಗಿರಲು ರಾಜಾಶ್ರಯ ನೀಡಿದರು.

ರಾಜಾಶ್ರಯ ತಪ್ಪಿದ ತರುವಾಯ ಈ ಸಮುದಾಯ ನಿರ್ಗತಿಕ ಸ್ಥಿತಿಗೆ ತಲುಪಿತು. ಇಂದು ಕಬ್ಬಿಣದಿಂದ ಕೇವಲ ಕುಡುಗೋಲು, ಈಳಿಗೆ, ಪಾವು, ಸೇರು, ಖಡ್ಗ, ಮುಂತಾದ ವಸ್ತುಗಳನ್ನು ತಯಾರಿಸಿ ಬದುಕನ್ನು ದೂಡುತ್ತಿದ್ದಾರೆ. ಹಾಗೆ ಕೃಷಿ ಉಪಕರಣಗಳಿಗೆ ಬೇಕಾಗುವ ಅನೇಕ ಕಬ್ಬಿಣದ ಕೆಲಸವನ್ನೂ ಮಾಡುತ್ತಾರೆ. ಗೃಹ ಬಳಕೆಯ ಸಾಮಾನುಗಳನ್ನು ತಯಾರಿಸಿಕೊಡುತ್ತಾರೆ. ದೊಡ್ಡ ದೊಡ್ಡ ಜಾತ್ರೆಗಳಲ್ಲಿ ತಿಂಗಳುಗಟ್ಟಲೇ ವಾಸ್ತವ್ಯ ಹೂಡಿ, ರೈತಾಪಿ ಜನರಿಗೆ ಅನುಕೂಲವಾಗುವ ಸಾಮಾನು ಗಳನ್ನು ಅಲ್ಲಿಯೇ ತಯಾರಿಸಿ ಮಾರಾಟ ಮಾಡುತ್ತಾರೆ. ಕೈಗಾರಿಕಾ ಕ್ರಾಂತಿಯ ಪರಿಣಾಮದಿಂದಾಗಿ ಇಂದು ಇವರ ಕಸಬುಗಳು ನೆಲಕಚ್ಚುತ್ತಿವೆ.

### ಕಬ್ಬಿಣದ ಕಚ್ಚಾ ಸಾಮಗ್ರಿಗಳ ಸಂಗ್ರಹ

ಕಬ್ಬಿಣದ ಕಚ್ಚಾ ಸಾಮಗ್ರಿಗಳನ್ನು ಎಲ್ಲಿಯೇ ಇರಲಿ ಅವನ್ನೆಲ್ಲಾ ತಂದುಕೊಳ್ಳುವರು. ಸಿಕ್ಲಿಗರರಿಗೆ ಮುಖ್ಯವಾಗಿ ಬೇಕಾದದ್ದು ಇದೆ. ಕಬ್ಬಿಣವನ್ನು ತರಲು ಅಂಗಡಿಗಳಿಗೆ ಹೋಗುವರು. ಅಲ್ಲಿಯೇ ತನಗೆ ಬೇಕಾದ ಕಬ್ಬಿಣದ ಕಚ್ಚಾಸಾಮಗ್ರಿಗಳನ್ನು ತರುತ್ತಾರೆ. ಅಲ್ಲದೇ ಬ್ಯಾರಲ್‌ಗಳು, ಡಾಂಬರ್ ಬ್ಯಾರಲ್‌ಗಳು, ನೀರಿನ ಬ್ಯಾರಲ್‌ಗಳು, ಎಣ್ಣೆಯ

ಬ್ಯಾರಲ್‌ಗಳು, ತಗಡು-ಕಬ್ಬಿಣದಿಂದ ಕೂಡಿದ್ದರೆ ಅವನ್ನೆಲ್ಲಾ ಸಂಗ್ರಹಿಸಿಕೊಳ್ಳುತ್ತಾರೆ ಕಚ್ಚಾಸಾಮಗ್ರಿಗಳಾದ ಕಬ್ಬಿಣದ ಸಾಮಾನುಗಳನ್ನು ಸಂಗ್ರಹಿಸಿಕೊಂಡು ನಂತರ ತಮ್ಮ ಕೈಚಳಕ ಹಾಗೂ ಶ್ರಮದ ಮೂಲಕ ವಸ್ತುಗಳ ತಯಾರಿಕೆಯಲ್ಲಿ ತೊಡಗುತ್ತಾರೆ.

ಕೆಲವು ವೇಳೆ ಇವರು ತಯಾರಿಸಿದ ವಸ್ತು ಮಾರಾಟವಾಗದ ವೇಳೆಯಲ್ಲಿ ಸಿಕ್ಲಿಗರ ಸಮುದಾಯ ಊಟಕ್ಕಾಗಿ ಪರದಾಟವನ್ನು ನಡೆಸಬೇಕಾದ ಸಂದಿಗ್ಧ ಸ್ಥಿತಿ ಬರುವುದೂ ಉಂಟು. ಸಿಕ್ಲಿಗರು ಚಳಿ ಮಳೆ, ಗಾಳಿ, ಬಿಸಿಲು ಎನ್ನದೇ ತನ್ನ ಕಸುಬುಗಳ ಕಡೆ ಗಮನ ನೀಡುತ್ತಾರೆ.

ಕಬ್ಬಿಣದ ಕೆಲಸದ ಜೊತೆಗೆ ಹಲವೆಡೆ ಹಂದಿಯನ್ನು ಸಾಕಿ ಅವುಗಳನ್ನು ಮಾರಾಟ ಮಾಡುವ ಪ್ರವೃತ್ತಿ ಹೊಂದಿದ್ದಾರೆ.

ಬೀದರ ಜಿಲ್ಲೆಯಲ್ಲಿ ಕೇವಲ ಒಬ್ಬ ಸಿಕ್ಲಿಗರನು 'ಡಿ' ಗ್ರೂಪ್ ನೌಕರನಾಗಿದ್ದಾನೆ. ಬೆಂಗಳೂರು 'Sikkh Welfare Association' ಎಂಬ ಸಂಸ್ಥೆ ಕೆಲವು ಕಡೆ ಸಿಕ್ಲಿಗರರಿಗೆ ಮನೆಗಳನ್ನು ಕಟ್ಟಿಸಿಕೊಟ್ಟಿದೆ. ಮನೆ ಕಟ್ಟಿಸಿಕೊಂಡವರು ಹಣದ ಮರುಪಾವತಿ ಮಾಡು ತ್ತಿದ್ದಾರೆ. ಹೀಗೆ ಇವರ ಬಗ್ಗೆ ಹೆಚ್ಚಿನ ಮುತುವರ್ಜಿಯನ್ನು ವಹಿಸಿಕೊಂಡ ಸಿಖ್ ಜನಾಂಗದಲ್ಲಿರುವ ಅನೇಕ ದಾನಿಗಳು ಇವರ ಕಲ್ಯಾಣಕ್ಕಾಗಿ ಹಣ ಖರ್ಚು ಮಾಡು ತ್ತಿದ್ದಾರೆ. ಗುಲ್ಬರ್ಗಾದಲ್ಲಿ ದಶಮೇಶ್ ಸ್ಕೂಲ್ ಒಂದರಲ್ಲಿ ಈ ಸಮುದಾಯದ ಮಕ್ಕಳಿಗೆ ಶಾಲೆಯನ್ನು ಕಲಿಯಲಿಕ್ಕೆ ಅವಕಾಶವನ್ನು ಮಾಡಿಕೊಡಲಾಗಿದೆ. ಹತ್ತಾರು ವರ್ಷಗಳಿಂದ ಒಂದೇ ಸ್ಥಳದಲ್ಲಿ ನೆಲೆಸಿರುವವರು ಬಿಪಿಎಲ್ ರೇಷನ್ ಕಾರ್ಡಗಳನ್ನು ಹೊಂದಿರುವರು.

ಕೆಲವು ಕಡೆ ಕಬ್ಬಿಣದ ಬುಟ್ಟಿಯನ್ನೇ ತಯಾರಿಸುತ್ತಾರೆ. ಕಾಂಕ್ರೇಟ್ ಕಲೆಸುವ ಯಂತ್ರದ ತಯಾರಿಕೆಯನ್ನು ಮಾಡುತ್ತಾರೆ. ಯಾವ ಭಾಗದಲ್ಲಿ ಏನು ಪ್ರಚಲಿತವಾಗಿ ಬೇಕಾಗಿದೆ ಎಂಬುದನ್ನು ಗಮನಿಸಿ ವಸ್ತುಗಳ ತಯಾರಿಕೆ ಮಾಡುತ್ತಾರೆ. ತಮ್ಮ ಮೂಲ ಸಂಸ್ಕೃತಿಗೆ ಸಂಬಂಧಿಸಿದಂತೆ ಹಲವಾರು ಘಟನೆಗಳನ್ನು ಆಧರಿಸಿಕೊಂಡು ಸಿಕ್ಲಿಗರು ಕೃಷಿಗೆ ಸಂಬಂಧಿಸಿದ ಹಲವಾರು ವಸ್ತುಗಳ ಚಾಲ್ತಿಗೆ ತಂದಿದ್ದಾರೆ. ಆದರೂ ಅವುಗಳ ಬಳಕೆ ನಿಂತಿಲ್ಲ. ಇಂದಿನ ದಿನಗಳಲ್ಲಿ ಆಧುನಿಕ ಯಂತ್ರೋಪಕರಣದಿಂದಾಗಿ ತನ್ನತನ ಉಳಿಸಿಕೊಳ್ಳಲು ಸಿಕ್ಲಿಗರರು ಹೆಣಗಾಡಬೇಕಾಗಿದೆ.

### ಆಧುನಿಕತೆಗೆ ತಕ್ಕಂತೆ ಮಾರ್ಪಾಡಾಗುವ ವಸ್ತುಗಳು

ಗೃಹ ಹಾಗೂ ಕೃಷಿಗೆ ಸಂಬಂಧಿಸಿದಂತೆ ಹಲವಾರು ವಸ್ತುಗಳು ಬಹಳ ಅವಶ್ಯವಾಗಿ ಬೇಕಾಗಿವೆ. ಇಂದಿನ ತಾಂತ್ರಿಕ ಹಾಗೂ ವೈಜ್ಞಾನಿಕವಾದ ಬೆಳವಣಿಗೆಯಿಂದಾಗಿ ತನ್ನ ಗುಣವನ್ನು ಕಳೆದುಕೊಳ್ಳುತ್ತಿದೆ. ಈ ಬುಡಕಟ್ಟು ಸಮುದಾಯ ಅತೀ ಬಡತನದಲ್ಲಿ ಬೆಂದು ಹೋದದ್ದರಿಂದ ಅವರಿಗೆ ಆಧುನಿಕತೆಗೆ ತಕ್ಕಂತೆ ಬದಲಾವಣೆ ಆಗುವುದು ಸಾಧ್ಯವಾಗುತ್ತಿಲ್ಲ. ಸಿಕ್ಲಿಗರರು ಬಹುಪಯೋಗಿ ಹಾಗೂ ಶ್ರಮದಾಯಕವಾದ ವಸ್ತುಗಳ ತಯಾರಿಕೆ ಮಾಡುತ್ತಿದ್ದಾರೆ. ಕಬ್ಬಿಣದ ಕೆಲಸವನ್ನು ಮಾಡುವ ಕಲೆ ಅವರಿಗೆ ವಂಶ ಪರಂಪರಾಗತವಾಗಿ ಬಂದಿದೆ.

ಇಂದಿನ ದಿನಮಾನಗಳಿಗೆ ತಕ್ಕಂತೆ ಬದಲಾಗಬೇಕಾಗಿದೆ. ಹೀಗಾಗಿ ಶಿಗ್ಗಾಂವದಲ್ಲಿ ಮೋಟಾರ್ ರಿವೈಂಡಿಂಗ್ ಕಾಯಕವನ್ನು ಆರಂಭಿಸಲಾಗಿದೆ. ಇಲ್ಲಿ ಕಬ್ಬಿಣದ ಕೆಲಸವಾದರೂ ಆಧುನಿಕತೆಗೆ ತಕ್ಕಂತೆ ಇಂತಹ ಅಂಗಡಿಗಳನ್ನು ಸ್ಥಾಪಿಸಿದ್ದಾರೆ. ಹಾಗೂ ಹುಬ್ಬಳ್ಳಿಯ ಸುಭಾಷ್ ನಗರದಲ್ಲಿ ಕಬ್ಬಿಣ ಕೆಲಸದ ಒಂದು ಕಾರ್ಖಾನೆ ಆರಂಭಿಸಲಾಗಿದೆ. ಕೈಕೆಲಸದಲ್ಲಿಯೇ ಮಾಡುವಂತಹ ಕಾರ್ಯವೂ ನೆಡೆದಿದೆ. ರಥವನ್ನು ಕಬ್ಬಿಣದಲ್ಲಿಯೇ ಮಾಡುವ ಜವಾಬ್ದಾರಿಯನ್ನು ಕಲಬುರ್ಗಿಯ ಸಿಕ್ಲಿಗರರು ಹೊತ್ತಿದ್ದಾರೆ. ಕಬ್ಬಿಣದ ಮೂಲ ಕುಲಕಸಬುಗಳನ್ನು ಕಾಪಾಡಿಕೊಂಡು ಬರುತ್ತಿದ್ದಾರೆ.

**ಸಿಕ್ಲಿಗರು ಸಿದ್ಧಪಡಿಸುವ ಬಳಕೆ ವಸ್ತುಗಳು**

| ಗೃಹ ಬಳಕೆ | ಕೃಷಿಬಳಕೆ | ಧಾರ್ಮಿಕ |
|---|---|---|
| ಚಾಕು | ಸಲಿಕೆ | ತಲವಾರ್ |
| ಚೂರಿ | ಗುದ್ದಲಿ | ಕಬ್ಬಿಣದ ರಥ |
| ಇಕ್ಕಳ | ಹಾರೆ | ಕಬ್ಬಿಣದ ದೇವರ ಮೂರ್ತಿಗಳು |
| ಕಬ್ಬಿಣದ ಒಲೆಗಳು | ಕುಡಗೋಲು | |
| ಕಡಾಯಿ | ಕುರ್ಜಿಗೆ | |
| ಹಂಚು | ಚಮ್ಮಟಿಗೆ | |
| ಇಣಕೆ ಬಳೆ | ಮೇಕು | |
| ಹಾರಿ (ಕಾರ ಕುಟ್ಟುವದು) | ಗಡಾರಿ | |
| ರೋಟಿ ಬೀಗ | ಉಡ | |
| ಮಚ್ಚು | ಗಾಲಿಅಚ್ಚು | |
| ಚಿಲಕ | ಕಡಾಣಿ | |
| ಗೂಟ | ಗುಂಬದ ಬಳೆ | |
| ಚಮಚ | ಹೊಂಗುಬಳೆ | |
| ಚುಚ್ಚುಗ (ಕಡಚಿ) | ಗಾಲಿಪಟ್ಟಿ | |
| ಕುಲುಮೆ ಊದುವದು | ಸುತ್ತಿಗೆ | |
| ಕುಟ್ಟಣಿಗಿ | ಚಾಣ | |
| ಅಡಿಕೆ ಕತ್ತರಿಸುವ | ಕತ್ತರಿಬಾಚಿ | |
| ಕತ್ತರಿ | ನೇಗಿಲು | |
| ಪಾವು, ಸೇರು. | ಅರ | |
| ಬುಟ್ಟಿ | ಉಳಿ | |
| ಬಾಗಿಲುಗಳ ಗ್ರಿಪರ್ | | |
| ಸೇಕಡಿ (ಒಲೆ) | | |
| ಬಾಂಡಿ | | |
| ತೂಗಿ ಹಾಕುವ ಸ್ಟ್ಯಾಂಡ್ | | |
| ಝರಿ | | |

### ಆಶ್ರಿತರ ವಯೋಗುಂಪು

ಸರ್ಕಾರವು ೦-೧೭ರ ವಯೋಮಾನದವರನ್ನು ನೇಮಕಾತಿಗೆ ಅನರ್ಹವೆಂದು ಭಾವಿಸುತ್ತದೆ. ಹಾಗೆ ೬೦ವರ್ಷಕ್ಕಿಂತ ಮೇಲ್ಪಟ್ಟವರು ಕೆಲಸ ಮಾಡಲು ಸಾದ್ಯವಾಗದ ಅಸಾಹಯಕರೆಂದು ಪರಿಗಣಿಸಲಾಗುತ್ತದೆ. ಸಿಕ್ಲಿಗರಲ್ಲಿ ೦-೧೭ರೊಳಗಿನವರ ಪ್ರಮಾಣ ೫೦.೬೭ ಇದೆ. ಹಾಗೇ ೬೦ ವರ್ಷಕ್ಕಿಂತ ಮೇಲ್ಪಟ್ಟವರ ಪ್ರಮಾಣವು ೨.೮೫ ರಷ್ಟಿದೆ. ಅಂದರೆ ಕಾಯಕಾರ್ಹವಲ್ಲದ ಗುಂಪಿನ ಪ್ರಮಾಣವು ೫೩.೫೨ ಎಂದು ತಿಳಿದುಬರುತ್ತದೆ. ಇವರನ್ನು ಅವಲಂಬಿತ ಗುಂಪೆಂದು ಪರಿಗಣಿಸಲಾಗಿದೆ.

**ಕೋಷ್ಟಕ: ೭.೧ ಸಿಕ್ಲಿಗರಲ್ಲಿ ಆಶ್ರಿತರ ವಯೋಗುಂಪು**

| ವಯೋಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|
| ೦-೧೭ ವಯಸ್ಸಿನ ಗುಂಪು | ४३५ | ४०१ | ೮३೬ |
| ೬೧ ವರ್ಷ ಮೆಲ್ಪಟ್ಟವರ ಗುಂಪು | ೨೫ | ೨೨ | ४೭ |

### ಕಾಯಕಾರ್ಹ ವಯೋಗುಂಪು

೧೮-೬೦ರ ವಯೋಮಾನದೊಳಗಿನವರನ್ನು ಕಾಯಕಾರ್ಹ ಗುಂಪೆಂದು ಪರಿಗಣಿಸಲಾಗಿದೆ. ಅಂಥವರು ಸಿಕ್ಲಿಗರಲ್ಲಿ ४೬.४೮ರ ಪ್ರಮಾಣದಲ್ಲಿದ್ದಾರೆ. ಕಾಯಕಾರ್ಹರಲ್ಲಿ ಪುರುಷರು ४೫.೯४, ಹಾಗೂ ಮಹಿಳೆಯರು ४೭.೦೫ರ ಪ್ರಮಾಣದಲ್ಲಿದ್ದಾರೆ.

**ಕೋಷ್ಟಕ: ೭.೨ ಸಿಕ್ಲಿಗರಲ್ಲಿ ಕಾಯಕಾರ್ಹ ವಯೋಗುಂಪು**

| ವಯೋಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|
| ೧೮-४೦ ವಯಸ್ಸಿನ ಗುಂಪು | ३೨೨ | ३३೫ | ೬೫೭ |
| ४೧-೬೦ ವಯಸ್ಸಿನ ಗುಂಪು | ೬೯ | ४೧ | ೧೧೦ |

### ಸಿಕ್ಲಿಗರಲ್ಲಿ ವಿವಿಧ ಕೆಲಸಗಳಲ್ಲಿ ತೊಡಗಿಕೊಂಡವರ ಪ್ರಮಾಣ

ಸಿಕ್ಲಿಗ ಸಮುದಾಯದಲ್ಲಿ ೧೮ ರಿಂದ ४೦ ವಯೋಗುಂಪಿನವರನ್ನು ವಿಶೇಷವಾಗಿ ಕಾಯಕರ್ಹ ಮತ್ತು ಪ್ರಜನನರ್ಹ ಗುಂಪೆಂದು ಪರಿಗಣಿಸಲಾಗಿದೆ. ಇವರಲ್ಲಿಯ ವಿವಿದ ವೃತ್ತಿಗಳನ್ನು ಅವಲಂಬಿಸಿರುವರು ಹೀಗಿದ್ದಾರೆ. ಕೃಷಿಕರು, ಕೃಷಿ ಕಾರ್ಮಿಕರುಗಳಲ್ಲಿ ಯಾರೊಬ್ಬರು ಕೆಲಸ ನಿರ್ವಹಿಸುವುದಿಲ್ಲದಿರುವುದು ಕಂಡುಬರುತ್ತದೆ. ಸರ್ಕಾರಿ ನೌಕರರು ಮತ್ತು ವ್ಯಾಪರಸ್ಥರು ಒಬ್ಬೊಬ್ಬರಿರುವುದ್ದು ಅಂಕಿಅಂಶಗಳಿಂದ ಕಂಡುಬಂದರೆ, ಮೂಲ ಕಸುಬಾದ ಕಬ್ಬಿಣ ಕೆಲಸ ನಿರ್ವಹಿಸುವ ಹಾಗೂ ಮಾರಾಟ ಮಾಡುವವರು ಶೇ. ೯೬ರಷ್ಟು ಇತರೆ ಕೆಲಸಗಳಾದ ಚಾಕು, ಕತ್ತಿ, ಲಾಂಗು, ಟಿನ್, ಡಬ್ಬಗಳಲ್ಲಿ ಬೀಗದ

ಕೀಲಿ, ಅಳತೆ ಮಾಪನಗಳು, ಕಬ್ಬಿಣದ ಚೌಟುಗಳು, ಗೃಹೋಪಯೋಗಿ ವಸ್ತುಗಳು ಮುಂತಾದ ಕೆಲಸಗಳಲ್ಲಿ ತೊಡಗಿರುವುದು ಕಂಡುಬರುತ್ತದೆ.

ಕೋಷ್ಟಕ: ೬.೩

ಸಿಕ್ಲಿಗರಲ್ಲಿ ವಿವಿಧ ಕೆಲಸಗಳಲ್ಲಿ ತೊಡಗಿಕೊಂಡವರ ಪ್ರಮಾಣ (೨೦೦೬)

| ವಿವರ | ಪುರುಷ | ಸ್ತ್ರೀ | ಒಟ್ಟು |
|---|---|---|---|
| ಕೃಷಿಕರು | – | – | – |
| ಕೃಷಿಕಾರ್ಮಿಕರು | – | – | – |
| ಸರಕಾರಿ ನೌಕರರು | ೧ | – | ೧ |
| ವ್ಯಾಪರಸ್ತರರು | ೧ | – | ೧ |
| ಕುಲ ಕಸುಬು (ಕಬ್ಬಿಣ ಕೆಲಸ) | ೪೩೧ | ೨೧೩ | ೬೪೪ |
| | ೪೩೩ | ೨೧೩ | ೬೪೬ |

## ಆಹಾರ ಪದ್ಧತಿ

ಸಿಕ್ಲಿಗರ ಸಂಸ್ಕೃತಿಯಲ್ಲಿ ಕೆಲವು ಸಮುದಾಯಗಳು ಬಂದು ಹೋಗುತ್ತವೆ. ಅವರ ಕುಲಕಸಬು ಒಂದೇ ಆದರೂ ಆಹಾರ ಪದ್ಧತಿಗಳಲ್ಲಿ ವಿಶೇಷವಾದ ಹಂತಗಳನ್ನು ಹೊಂದಿರುತ್ತಾರೆ. ಇವರು ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗುವುದರಿಂದ ಸಹಜವಾಗಿ ಆಹಾರ ಪದ್ಧತಿ ಅದಕ್ಕನುಗುಣವಾಗಿ ಹೊಂದಿಕೊಂಡು ಹೋಗಬೇಕಾಗುತ್ತದೆ. ಆ ಪರಿಸರ ಅಲೆಮಾರಿತನದ ಮೇಲೆಯೆ ಅವರ ಆಹಾರ ಪದ್ಧತಿ ಅವಲಂಬಿತವಾಗಿರುವುದು ಕಂಡು ಬರುತ್ತದೆ. ಸಿಕ್ಲಿಗರ ಆಹಾರ ಪದ್ಧತಿಯಲ್ಲಿ ಸರಳತೆ ಕಂಡು ಬರುವುದು. ಸಸ್ಯ ಆಹಾರ ಹಾಗೂ ಮಾಂಸ ಆಹಾರಗಳನ್ನು ಸೇವಿಸುವಾಗಲೂ ಅದರಲ್ಲಿ ಸಾದಾತನ ಕಾಣುವೆವು.

೮

# ಸಾಹಿತ್ಯ ಮತ್ತು ಭಾಷೆ

ಮೂಲತಃ ಅಲೆಮಾರಿ ಸಮುದಾಯವೆಂದು ಗುರುತಿಸಲಾಗುವ ಸಿಕ್ಲಿಗರ ಜನರು, ಇಂತಹ ಅನೇಕ ಸಮುದಾಯದವರಂತೆ ತಮ್ಮದೇ ಆದ ಸಂಪ್ರದಾಯ ಆಚರಣೆಗಳನ್ನು ರೂಢಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಮದುವೆಯು ಒಂದು ಸಂಪ್ರದಾಯ ವಾಗಿ ಅದಕ್ಕೆ ಸಂಬಂಧಿಸಿದ ಹಾಡುಗಳೂ ಬೆಳೆದು ಬಂದಿರುವುದು ಸಿಕ್ಲಿಗಾರರ ಬದುಕಿನಿಂದ ತಿಳಿದುಬರುತ್ತದೆ.

ಭಾರತದ ಇತರ ಧರ್ಮಗಳ ಸಂಪ್ರದಾಯ ಹಾಗೂ ಅಲೆಮಾರಿ ಸಮುದಾಯಗಳ ಸಂಪ್ರದಾಯ, ಆಚರಣೆಗಳು ಭಿನ್ನವಾಗಿರುವಂತೆ ಸಿಕ್ಲಿಗಾರರ ಮದುವೆ ಆಚರಣೆಯೂ ತೀರ ಭಿನ್ನವಾಗಿ ಕಾಣುತ್ತವೆ. ಈ ಸಂದರ್ಭದಲ್ಲಿ ಅವರು ಹಾಡುವ ಹಾಡುಗಳು ತುಂಬ ವಿಶಿಷ್ಟ ಹಾಗೂ ವಿಭಿನ್ನವಾಗಿ ಬೆಳೆದು ಬಂದಿವೆ. ಮದುವೆಗೆ ಮುನ್ನ ಇತರ ಸಮುದಾಯಗಳಲ್ಲಿ ನಡೆಯುವ ಕುಂಕುಮ ಹಚ್ಚುವ ಕಾರ್ಯಕ್ರಮವು ಸಿಕ್ಲಿಗಾರರಲ್ಲಿಯೂ ನಡೆಯುತ್ತದೆ. ಈ ಕುಂಕುಮ ಹಚ್ಚುವ ಸಂದರ್ಭದಲ್ಲಿ ಅವರು ಹಾಡುವ ಹಾಡು ಹೀಗಿದೆ.

"ಉಡಾವ, ಉಡಾವ
ಜಾರೋ ಭನ್ನಡಾ
ಥಾಡೋ ಪತಂಗ ಉಡೋರೋ ಬನ್ನಡಾ
ಇತ್ತೊ ಬನ್ನಿತ ನಯನ
ಲಡಾರೋ ಬನ್ನಡಾ
ಥಾಡೋ ಪತಂಗ ಉಡಾರೋ ಬನ್ನಡಾ" ಎಂದು ಮುಂದುವರಿಯುತ್ತದೆ.

ಸಿಕ್ಲಿಗರು ಈ ಕುಂಕುಮ ಕಾರ್ಯವನ್ನು ತೀರ ಸಂತೋಷದಿಂದ ಆಚರಿಸುತ್ತಾರೆ. ಪತಂಗ(ಗಾಳಿಪಟ)ದಂತೆ ಕಣ್ಣುಗಳನ್ನು ಹಾಸುತ್ತ, ಸಂತೋಷಭರಿತ ನಯನಗಳಿಂದ ಕಾತರದಿಂದ ನೋಡುತ್ತಾನೆ. ಮದುಮಗ ಎಂಬರ್ಥ ಈ ಹಾಡಿನಿಂದ ಹೊರಹೊಮ್ಮು ತ್ತದೆ. ಪತಂಗ ಎನ್ನುವಲ್ಲಿ ಮದುಮಗನ ಕಾತರದ ಚಂಚಲತೆಯ ಸಂಕೇತವಾಗಿ 'ಗಾಳಿಪಟ'ನ್ನು ಹೋಲಿಕೆಯಾಗಿ ಬಳಸಲಾಗಿದೆ. ಹಾಗೆಯೇ ಅರಿಶಿಣ ಹಚ್ಚುವಾಗಲೂ

ಸಿಕ್ಲಿಗರು ಹಾಡುಗಳನ್ನು ಹಾಡುತ್ತಾರೆ. ಇದನ್ನು ಅವರು 'ಹಲದಿ' ಕಾರ್ಯಕ್ರಮವೆಂದು ಕರೆಯುತ್ತಾರೆ.

ಮದುಮಗಳಿಗೆ ಅರಿಶಿಣ ಹಚ್ಚುವಾಗ-

'ಬನ್ನಿ ಸಾಸರೇಸೆ

ಆಯೋ ಹಲದಿಕೇ ಜೋಡರೇ' ಎಂದು ಹಾಡು ಪ್ರಾರಂಭಿಸುತ್ತಾರೆ. ಇದರ ಅರ್ಥ 'ಹೆಣ್ಣೆ ನಿನ್ನ ಮಾವನವರಿಂದ ಅರಿಶಿಣ ಬಂದಿದೆ' ಎಂಬರ್ಥ. ಹಾಡು ಮುಂದುವರಿದಂತೆ ಅತ್ತೆ ಮಾವನ ಮನೆಯಿಂದ ಬಳೆಗಳು ಬಂದಿವೆ, ಅಂತೆಯೇ ಸೀರೆ ಕುಪ್ಪಸವೂ ಬಂದಿವೆ. ಉಡುಪು ತೊಡುಪುಗಲೆಲ್ಲ ಬಂದಿವೆ. ಅವುಗಳನ್ನು ಉಟ್ಟು ಶೃಂಗಾರಗೊಳ್ಳು ಎಂದು ಮಧುಮಗಳನ್ನು ಸೂಚಿಸುವ ಭಾವ ವ್ಯಕ್ತವಾಗುತ್ತದೆ. ಮದುಮಗಳ ಸುತ್ತಲೂ ಬರೀ ಹೆಣ್ಣುಮಕ್ಕಳೇ ಇದ್ದು ಈ ಎಲ್ಲ ಉಡುಪು ತೊಡುಪುಗಳನ್ನು ಹೀಗೆ ಹಾಡುತ್ತಾ ಉಡಿಸುತ್ತಾರೆ. ಹೀಗೆ ಮದುಮಗಳು ಮೊದ ಮೊದಲು ನಾಚಿ ಕೊಂಡರೂ ಅತ್ತೆಮಾನವರ ಮನೆಯಿಂದ ಬಂದ ಎಲ್ಲ ಉಡುಗೆ ತೊಡುಗೆಗಳನ್ನು ತೊಟ್ಟು ಸಿದ್ಧಳಾಗುತ್ತಾಳೆ.

ಹೀಗೆ ಅರಿಶಿಣ ಹಚ್ಚುವ ಸಂದರ್ಭದಲ್ಲಿ ಅನೇಕ ಹಾಡುಗಳನ್ನು ಸಿಕ್ಲಿಗರ ಹೆಣ್ಣುಮಕ್ಕಳು ಹಾಡುತ್ತಾರೆ. ಅಂತದ್ದೇ ಇನ್ನೊಂದು ಹಾಡಿನಲ್ಲಿ-

'ಹಲದಿ ಪೈನೋ ಬನ್ನಾ ಅಭಿ ದೇಕಿತಿ

ಹಲದಿ ಪೈನೋ ಬನ್ನಾ ಜಭಿ ದೇಕಿತಿ' ಎಂದು ಮದುಮಗನಿಗೆ ಅರಿಶಿಣ ಹಚ್ಚುವಾಗ ಹಾಡಲಾಗುತ್ತಿದೆ. ಮುಂದುವರೆದು-

'ಮಹೆಂದಿ ಪೈನೋ ಬನ್ನಾ ಅಭಿ ದೇಕಿತಿ

ಮಹೆಂದಿ ಪೈನೋ ಬನ್ನಾ ಜಭಿ ದೇಕಿತಿ

ತುಮ್ ಗುಲಾಬಕೆ ಫೂಲ್

ಮೈ ಅನಾರಕಲಿ ಅಭಿ ದೇಕಿತಿ

ಮೈ ಅನಾರಕಲಿ ಜಭಿ ದೇಕಿತಿ' ಎಂದೆಲ್ಲ ಹಾಡುತ್ತಾರೆ. ಮದುಮಗನಿಗೆ ಮೆಹಂದಿ ಹಚ್ಚಿಕೊಳ್ಳಲು, ರುಮಾಲು ಸುತ್ತಿಕೊಳ್ಳಲು ಕೇಳಿಕೊಳ್ಳುವ ರೀತಿ ಈ ಹಾಡಿನಲ್ಲಿದೆ ಎಂದು ಮದುಮಗಳನ್ನು ಅನಾರಕಲಿ ಎಂದೂ ವರ್ಣನೆ ಇದೆ.

ಹೀಗೆ ಅರಿಶಿಣ ಹಚ್ಚಿ ಮದುಮಗನಿಗೂ ಮದುಮಗಳಿಗೂ ಸಿಂಗಾರಗೊಳಿಸಿ ಸಂತೋಷಪಡುವ ಸಂದರ್ಭ ಇದು. ಇಷ್ಟೆಲ್ಲ ಸಿದ್ಧತೆಗಳಾದ ಮೇಲೆ ಮದುಮಗ, ಬಂಧುಬಾಂಧವರೆಲ್ಲ ಬಂದು ಒಂದೆಡೆ ಇದ್ದು ಹುಡುಗಿಯ ಮನೆಗೆ ತಮ್ಮನ್ನು ಕರೆದೊಯ್ಯಲು ಹೇಳಿ ಕಳಿಸುತ್ತಾರೆ.

ಆಗ ಮದುಮಗನ ಕಡೆಯ ಹೆಂಗಳೆಯರು ಮದುಮಗನ ಪರವಾಗಿ ಹಾಡು ಹೇಳುತ್ತಾರೆ.

"ಮೈ ದೂಲಾ ಆಯಾ ಹೂಂ

ಮಂಡವೆ ಮೇಲೆ ಟಹರಾ ಹೂಂ

ಸಾಸೂ ಭೇಜೊ ದುಲವನಿಯಾ" ॥೨॥

"ಮೈ ದೂಲಾ ಆಯಾ ಹೂಂ
ಟೇಶನ್ ಮೇ ಟಹರಾ ಹೂಂ
ಸಾಲಾ ಭೇಜೋ ದುಲವನಿಯಾ" ॥೨॥

"ಮೈ ದೂಲಾ ಆಯಾ ಹೂಂ, ಎಂದೆಲ್ಲ ಹಾಡು ಮುಂದುವರೆದು
ಮೈದೂಲಾ ಆಯಾ ಹೂಂ
ಟೇಶನ್ ಮೇ ಟಹರಾ ಹೂಂ
ದೂಲನ್ ಭೇಜೋ ದುಲವನಿಯಾ ॥೨॥

ಮೈ ದೂಲಾ ಆಯಾ ಹೂಂ" ಎಂದು ಹಾಡು ಕೊನೆಗೊಳ್ಳುತ್ತದೆ.

**ಕನ್ನಡ ಭಾವರ್ಥ:** ನಾನು ಮದುಮಗ ಬಂದಿದ್ದೇನೆ, ಮಾವನವರನ್ನು ಕಳಿಸಿಕೊಡಿ ಹೆಣ್ಣಿನವರೇ, ನಾನು ಸ್ಟೇಷನ್‌ನಲ್ಲಿ ನಿಂತಿದ್ದೇನೆ.

ಅಳಿಯ(ಸಾಲಾ)ನನ್ನು ಕಳಿಸಿರಿ, ನಮ್ಮನ್ನು ಕರೆದೊಯ್ಯಲು ಎಂದೆಲ್ಲ ಹಾಡುತ್ತಾ ಯಾರೂ ಕರೆದೊಯ್ಯಲು ಬರದೇ ಇರುವಾಗ ನಾನು ಸ್ಟೇಷನ್‌ನಲ್ಲಿ ನಿಂತಿದ್ದೇನೆ. ಹೆಣ್ಣನ್ನು (ಮದುಮಗಳನ್ನು) ಕಳಿಸಿಕೊಡಿರಿ ಎಂದು ಆದೇಶ ಕೊಡುವ ಧಾಟಿ ಇಲ್ಲಿದೆ. ಹೀಗೆಯೇ ಅನೇಕ ಅರ್ಥಪೂರ್ಣ ಮನರಂಜನೆಯ ಹಾಡುಗಳನ್ನು ಸಿಕ್ಲಿಗರ ಹೆಣ್ಣು ಮಕ್ಕಳು ಆಯಾ ಸಂದರ್ಭಗಳಲ್ಲಿ ಹಾಡುಗಳನ್ನು ಹಾಡುತ್ತಾರೆ.

ಅನ್ಯ ಸಮುದಾಯದಲ್ಲಿ ಇರುವಂತೆ ಸಿಕ್ಲಿಗರಲ್ಲಿಯೂ ಅಳಿಯನಿಗೆ ಒಪ್ಪುವಂತಹ ಬಟ್ಟೆ ಬರೆಗಳನ್ನು, ಪಾದರಕ್ಷೆಗಳನ್ನು ಕೊಡಿಸಲಾಗುತ್ತದೆ. ಅವುಗಳ ಕುರಿತ ವರ್ಣನೆಯೂ ಈ ಕೆಳಗಿನ ಹಾಡಿನಲ್ಲಿದೆ.

ಬನ್ನಾ ತೋರಾ ಪಟಕಾ ತೋ ಲಾಕೌಂಕಾ
ಚಿಲ್ಲಾ ಹಜಾರೋಂಕಾ
ಬಡಿ ದೂರಸೆ ಆಯೋ ಬನ್ನಾ
ಬಡಿ ಧೂಮಸೆ ಆಯೋ ಮನ್ನಡಾ ಅಮೀರಕಾ
ಬನ್ನಾ ತೋರಾ ಕುಡತಾ ಲಾಕೌಂಕಾ
ಗುಂಡಿ ಹಜಾರೋಂಕಿ
ಬಡಿ ದೂಂಸೆ ಆಯೋ ಬನ್ನಾ
ಬಡಿ ಧೂಮಸೆ ಆಯೋ ಬನ್ನಡಾ ಅಮೀರಕಾ
ಘಟಲ್ಲ ಲೌಕೌಂಕೀ ಪಟ್ಟಾ ಹಜಾರೋಂಕಾ
ಜೋಡಾಪೇ ತೇರೋ ಲಾಕೌಂಕಾ
ಪಟ್ಟಾ ಹಜಾರೋಂಕಿ
ಬನ್ನಾ ಬಡಿ ದೂರಸೆ ಆಯೋ
ಬಡಿ ಧುಮಸೆ ಆಯೋ ಅಮೀರಕಾ ಎಂದು ಹಾಡಲಾಗುತ್ತದೆ

ಭಾವರ್ಥ: ಮದುಮಗನ ರುಮಾಲ ಲಕ್ಷಗಳದ್ದು, ತುರಾಯಿ ಸಾವಿರಾರು ರೂಪಾಯಿಗಳದ್ದು, ಬಹಳ ದೂರದಿಂದ ಬಹಳ ಸಂಭ್ರಮದಿಂದ ಶ್ರೀಮಂತ ಮದುಮಗ ಬಂದಿದ್ದೀಯ, ಮದುಮಗ ನಿನ್ನ ಅಂಗಿ ಲಕ್ಷ ಲಕ್ಷ ರೂಪಾಯಿಗಳದ್ದು ಅದರ ಗುಂಡಿ ಸಾವಿರಾರು ರೂಪಾಯಿಗಳದ್ದು ಬಹಳ ದೂರದಿಂದ ತುಂಬ ಸಂಭ್ರಮದಿಂದ ಶ್ರೀಮಂತನ ಮಗ ಬಂದಿದ್ದೀಯ,

ಪ್ಯಾಂಟು ಲಕ್ಷ ರೂಪಾಯಿಗಳದ್ದು
ಬೆಲ್ಟು ಸಾವಿರ ಸಾವಿರದ್ದು
ಪಾದರಕ್ಷೆ ನಿನ್ನವು ಲಕ್ಷ ಲಕ್ಷದ್ದು

ಅದರ ದಾರ(ಲೇಸ್) ಸಾವಿರಾರು ರೂಪಾಯಿಗಳದ್ದು ಬಹಳ ದೂರದಿಂದ ತುಂಬ ಸಂಭ್ರಮದಿಂದ ಶ್ರೀಮಂತನ ಮಗ ಬಂದಿದ್ದೀಯ ಎಂದರ್ಥವಿದೆ. ಹೀಗೆ ಮದುಮಗನ ರುಮಾಲು, ಅದಕ್ಕಂಟಿಸಿದ ತುರಾಯಿ, ಅಂಗಿ, ಅಂಗಿಯ ಗುಂಡಿ, ಪ್ಯಾಂಟು, ಅದಕ್ಕೆ ಬೆಲ್ಟು, ಪಾದರಕ್ಷೆ, ಅದಕ್ಕಿರುವ ದಾರ ಹೀಗೆ ವರನ ಮೈಮೇಲಿರುವ ಪ್ರತಿಯೊಂದು ಲಕ್ಷ, ಸಾವಿರ ಸಾವಿರ ರೂಪಾಯಿಗಳಷ್ಟು ಎಂಬ ವರ್ಣನೆ ಬರೀ ವರ್ಣನೆಯಾದರೂ ಆಗ ಆಯಾ ವಸ್ತುಗಳ ಬೆಲೆ ದೊಡಸ್ತಿಕೆ ಅವಕ್ಕಿರುವ ಗೌರವ ಮುಂತಾದವುಗಳನ್ನು ಈ ಹಾಡು ಸಾರಿ ಹೇಳುತ್ತದೆ.

ಪಂಚಪದಿ ಹಾಡು

ಏಕ ಫೇರಾರೇ ಬೇಟಿ
ಮಾ ಬಾಪ ಕೀ
ದೂಜೋ ಫೇರಾರೇ ಬೇಟಿ
ಭಾಯಿಕೋ
ತೀಜೋ ಫೇರಾರೇ ಬೇಟಿ
ಬಹಣಿ ಕೋ
ಚೌತೋ ಫೇರಾರೇ ಬೇಟಿ
ಜಾತಿ ಕೋ
ಪಾಚವೋ ಫೇರಾರೇ ಬೇಟಿ
ಹೋಗಯಿ ರೇ ಪರಾಯಿ

ಸಾರಂಶ : ಒಂದನೆಯ ಸುತ್ತಿಗೆ ಮಗಳು ತಾಯಿ ತಂದೆಯಿಂದ, ಎರಡನೆ ಸುತ್ತಿಗೆ ಸೋದರನಿಂದ, ಮೂರನೆ ಸುತ್ತಿಗೆ ಸೋದರಿಯರಿಂದ, ನಾಲ್ಕನೆಯ ಸುತ್ತಿಗೆ ತನ್ನ ಜಾತಿಯಿಂದ, ಐದನೆಯ ಸುತ್ತಿಗೆ ಅನ್ಯರವಳಾಗಿ ಹೋಗುತ್ತಾಳೆ. ಹೀಗೆ ಅನ್ಯಳಾಗಿ ಹೋಗುವ ಮಗಳು ತಂದೆ ತಾಯಿ, ಅಣ್ಣ ತಮ್ಮ, ಅಕ್ಕ ತಂಗಿ ಹಾಗೂ ತಮ್ಮ ದೈವದ ಗೌರವ ಕಾಪಾಡುವ ಪಣ ತೊಡುವ ಅವರ ಹೆಸರಿಗೆ ಕಳಂಕ ತರದಿರುವ ಶಪಥ ಮಾಡಿದಂತೆ ಗಂಡನ ಮನೆಯಲ್ಲಿ ಒಳ್ಳೆಯ ಗೃಹಿಣಿಯಾಗಿ ಬಾಳಲು ಹರಸಲಾಗುತ್ತದೆ.

ನೀತಿಯ ನೆಲೆಗಟ್ಟಿನ ಮೇಲೆ ಹೆಣ್ಣು ಬದುಕಬೇಕಾದ ಸೂಚನೆಗಳನ್ನು ಈ ಪಂಚಪದಿ ಸ್ತೋತ್ರದಲ್ಲಿ ವ್ಯಕ್ತವಾಗಿದೆ. ಅದನ್ನು ಸಿಕ್ಲಿಗರ ಯಾವ ಹೆಣ್ಣು ಮಗಳು ಮೀರದೆ ನಿಷ್ಠೆಯಿಂದ ಬದುಕಿನುದ್ದಕ್ಕೂ ಪಾಲಿಸಿಕೊಂಡು ಬರುತ್ತಾಳೆ.

ಮದುವೆಯಾದ ಮೇಲೆ ಮದುಮಗಳನ್ನು ಕರೆತಂದ ಸಂದರ್ಭದಲ್ಲಿ ಮದುಮಗನ ತಂದೆ ತಾಯಿ ಬಂಧುಗಳಿಗೆ ಓಣಿಯವರಿಗೆ ಗೆದ್ದು ಬಂದ ಸಂತೋಷ. ಆ ಸಂತೋಷವನ್ನು ಅವರು ಹೀಗೆ–

ಬನ್ನಿ ಜೀತ ತಾವೋರೇ
ಸಸುರಾಲ ಗಲಿಯಾ
ಬನ್ನಿ ಜೀತ ಲಾವೋರೇ ಎಂದು ಹಾಡುತ್ತಾರೆ.

ಅತ್ತೆ ಮಾವರ ಊರಿಂದ ಹೆಣ್ಣು ಗೆದ್ದು ತಂದೆವು ಎಂದು ಮುಂತಾಗಿ ಸರ್ವರೂ ಸಂತೋಷ, ಸಂಭ್ರಮದಿಂದ ಆಚರಿಸುತ್ತಾರೆ.

ಹೀಗೆ ಕುಂಕುಮ ಹಚ್ಚುವ ಕಾರ್ಯದಿಂದ ಹಿಡಿದು ಅಕ್ಷತೆ, ಅಕ್ಷತೆಯ ನಂತರ ವಧುವನ್ನು ವರನ ಮನೆಗೆ ಕರೆದುಕೊಂಡು ಹೋಗುವವರೆಗಿನ ಅವಧಿಯಲ್ಲಿ ಅನೇಕ ಸಣ್ಣ ಪುಟ್ಟ ಆಚರಣೆಗಳು ಅವು ಅನಿವಾರ್ಯವಾಗಿ ಆಚರಿಸಲೇಬೇಕಾದಾಗ ಸಿಕ್ಲಿಗಾರರು ದುಃಖಿಪಡದೆ ಬಂದಂತೆ ಬದುಕನ್ನು ಸ್ವೀಕರಿಸಿ ಧೈರ್ಯದಿಂದ ಬದುಕನ್ನು ಸಾಗಿಸುತ್ತಾರೆ. ಆ ಎಲ್ಲ ಆಚರಣೆಗಳಿಗೂ ಅರ್ಥ ಮಹತ್ವ ಇದ್ದೇ ಇದೆ. ಇಂತಹ ಅನೇಕ ಆಚರಣೆ, ಶಪಥಗಳ ಮೂಲಕ ಬದುಕಿನ ಬಂಡಿಗೆ ಹೆಗಲನ್ನು ನೀಡಿದ ಗಂಡ ಹೆಂಡತಿ ಬರುವ ಕಷ್ಟಗಳಿಗೆ ಹೆದರದೆ ಬಾಳುತ್ತಾರೆ.

ಸಂಸಾರ ಎಂದ ಮೇಲೆ ಕುಂದುಕೊರತೆ, ಸಿಟ್ಟು ಸೆಡವುಗಳು ಸಹಜ. ಅನುಸರಿಸಿಕೊಂಡು ಹೋದಾಗಲೇ ಬದುಕು ಬಂಗಾರವಾಗಲು ಸಾಧ್ಯ. ಕನ್ನಡದಲ್ಲಿ "ಗಂಡ ಹೆಂಡಿರ ಜಗಳ ಉಂಡು ಮಲಗುವ ತನಕ" ಎಂಬ ಗಾದೆ ಮಾತೊಂದಿದೆ. ಅದನ್ನು ಮೀರಿ ಜಗಳ ಮುಂದುವರೆದರೆ ಬದುಕು ಬಿರುಕಿಗೆ ಈಡಾಗಬೇಕಾಗುತ್ತದೆ. ಅರಿತು ಬಾಳಿದರೆಯೇ ಬದುಕು ಹಸನಾಗುತ್ತದೆ. ಅದಕ್ಕೆಂದೇ ಸಿಕ್ಲಿಗರ ಮಹಿಳೆ ಗಂಡ ಮುನಿಸಿಕೊಂಡಾಗ ಅಂದುಕೊಳ್ಳುವುದು ಹೀಗೆ–

ಚಾವಲ ಮಂಗಾಯಾ ದುಕಾನಸೇ
ಖಾನಾ ಪಕಾಯೀ ಬಡಿ ಸೋಕಸೇ
ಖಾನೆವಾಲಾ ರೂಸಗಯಾ
ಮೈ ಖಾನಾ ಪಕಾಕೆ ಕ್ಯಾ ಕರೂ
ಮೇರೆ ಮನಕೋ ಜಲಾದಿಯಾ
ಸೂರತ್ ದೇಕ ಕೆ ಕ್ಯಾಕರೂ
ಗಡೆ ಮಂಗಾಯಿ ಬಜಾರಸೆ
ಪಾನಿ ಭರಿ ಬಡಿ ಸೋಕಸೇ

ಪೀನೇವಾಲೆ ರೂಸಗಯಾ
ತೋ ಪಾನಿ ಭರಕರ್ ಕ್ಯಾ ಕರೂ
ಮೇರೆ ಮನ್ ಕೋ ಜಲಾದಿಯಾ
ಸೂರತ್ ದೇಕ ಕೆ ಕ್ಯಾಕರೂ
ಫೂಲ ಮಂಗಾಯ ಬಜಾರಸೇ
ಬಾಂಧನೇವಾಲಾ ರೂಸಗಯಾ
ಫೂಲ ಮಂಗಾಕರ್ ಕ್ಯಾ ಕರೂ
ಮೇರೆ ಮನ್ ಕೋ ಜಲಾದಿಯಾ
ಸೂರತ್ ದೇಕ ಕೆ ಕ್ಯಾಕರೂ

**ಸಾರಂಶ :** ಅಂಗಡಿಯಿಂದ ಅಕ್ಕಿ ತರಿಸಿ ಅಡಿಗೆ ಮಾಡಿದೆ ಸಂತೋಷದಿಂದ, ಉಣ್ಣುವ ಒಡೆಯ ಗಂಡ ಮುನಿಸಿಕೊಂಡ, ಅಡಿಗೆ ಮಾಡಿ ಏನು ಮಾಡಲಿ, ನನ್ನ ಮನಸ್ಸಿಗೆ ನೋವು ನೀಡಿದವನ ಮುಖ ನೋಡಿ ನಾನೇನು ಮಾಡಲಿ ಹೀಗೆಯೇ ಕೊಡ ತರಿಸಿದೆ ಬಜಾರದಿಂದ, ನೀರು ತುಂಬಿದೆ ಖುಷಿಯಿಂದ ಆದರೆ ಕುಡಿಯುವ ಗಂಡ ಮುನಿಸಿಕೊಂಡ, ನೀರು ತುಂಬಿ ನಾನೇನು ಮಾಡಲಿ, ನನ್ನ ಮನಸಿಗೆ ನೋವು ನೀಡಿದವನ ಮುಖ ನೋಡಿ ನಾನೇನು ಮಾಡಲಿ. ಮೂರನೆಯ ನುಡಿಯಲ್ಲಿ ಹೇಳುತ್ತಾಳೆ ಹೂವು ತರಿಸಿದೆ ಸಂತೆಯಿಂದ ತಂದ ಹೂವನ್ನು ಬಹಳ ಸಂತೋಷದಿಂದ ಕಟ್ಟಿದೆ, ಮುಡಿಸುವವನೆ ಮುನಿಸಿಕೊಂಡ, ಹೂವು ತರಿಸಿ ಮಾಡಲೇನು ನನ್ನ ಮನಸಿಗೆ ನೋವು ನೀಡಿದವನ ಮುಖ ನೋಡಿ ನಾನೇನು ಮಾಡಲಿ ಎಂಬ ಬೇಸರದ ದನಿಯಿಂದ ಹಾಡಿ ತನ್ನ ಮನದ ಭಾರವನ್ನು, ಭಾವವನ್ನು ಹೊರಹಾಕುತ್ತಾಳೆ.

ಈ ರೀತಿಯಾಗಿ ಸಿಕ್ಲಿಗರ ಬದುಕಿನಲ್ಲಿ ಈ ತರಹದ ಸಂಪ್ರದಾಯಗಳು ಅವರನ್ನು ಅಂಟಿಕೊಂಡೇ ಬಂದಿವೆ. ಇಂತಹ ಸಂಪ್ರದಾಯದ ಹಾಡುಗಳನ್ನು ದುಡಿದುಡಿದು ಬೇಸತ್ತಾಗ, ಮನಸ್ಸು ಗೊಂದಲಗೊಂಡಾಗ ಹಾಡಿ ಆಗಳಿಗೆಯನ್ನು ಆ ಘಟನೆಯನ್ನು ನೆನೆದು ಸಂತಸವನ್ನು ಸಮಾಧಾನವನ್ನು ಪಡೆದುಕೊಳ್ಳುತ್ತಾರೆ. ಇತ್ತೀಚೆಗೆ ತೀವ್ರ ನಾಗರೀಕತೆಯ ಪ್ರಭಾವಕ್ಕೆ ಒಳಗಾದ ಬುಡಕಟ್ಟು ಅಲೆಮಾರಿ ಸಮುದಾಯಗಳು ತಮ್ಮ ಸಂಪ್ರದಾಯ ಆಚರಣೆಗಳನ್ನು ಮರೆಯುತ್ತಿವೆ. ಇದಕ್ಕೆ ಇಂದಿನ ಸಮೂಹ ಮಧ್ಯಮಗಳೂ ಕಾರಣವಾಗಿವೆ. ಸಿಕ್ಲಿಗರಲ್ಲಿ ಅನಕ್ಷರತೆ ಮನೆ ಮಾಡಿರುವುದರಿಂದ ಅವರ ಬದುಕಿನ ಕುರಿತ ಪುರಾಣ ಐತಿಹ್ಯ, ಹಾಡು, ಕಥೆ, ಸಂಪ್ರದಾಯ ಆಚರಣೆಗೆ ಇವುಗಳನ್ನು ದಾಖಲಿಸಲಾಗಿಲ್ಲ.

**ಭಾಷೆ**

ಸಿಕ್ಲಿಗರ ಭಾಷೆ ಪಂಜಾಬಿಗೆ ಹತ್ತಿರವಿರಬಹುದು. ಇವರು ಪಂಜಾಬಿ ಮತ್ತು ಆಯಾ ರಾಜ್ಯಗಳಲ್ಲಿಯ ಲಿಪಿ ಭಾಷೆಗಳನ್ನು ವ್ಯವಹಾರಕ್ಕಾಗಿ ಬಳಸುವರು. ಅವರು ಬಳಸುವ ಪದಗಳ ಪಟ್ಟಿಯನ್ನು ಇಲ್ಲಿ ನೀಡಲಾಗಿದೆ.

| ಕನ್ನಡ | ಸಿಕ್ಲಿಗ ಭಾಷೆ | ಕನ್ನಡ | ಸಿಕ್ಲಿಗ ಭಾಷೆ |
|---|---|---|---|
| **ಶರೀರದ ಅಂಗಗಳು** | | | |
| ಬುದ್ಧಿಹಲ್ಲು | ಜಾಡ್ | ಕಾಲ್ಬೆರಳು | ಪೈರಕಾ ಅಂಗುಟಾ |
| ಕೈಬೆರಳು | ಅಂಗಲಿ | ಹೆಬ್ಬೆರಳು | ಹಾತ್ತೂಕೋ ಗುಂಟಾ |
| ಕಣ್ಣು | ಆಕ್ | ಕರುಳು | ಆತಡಿ |
| ತುಟಿ | ಹೋಟ್ | ಹಿಮ್ಮಡಿ | ಏಡ್ಡಿ |
| ಭುಜ | ಕಂದ್ರೋ | ಕಣತಲೆ | ಪಲಕ್ |
| ಸೊಂಟ | ಕಮ್ಮರ್ | ಮಣಿಕಟ್ಟು | ಸೇರ್ರೋ |
| ಕಿವಿ | ಕಾನ್ | ಕಿರುಬೆರಳು | ಚಿಚ್ಚಿ ಅಂಗಲಿ |
| ಕಂಕು | ತುಂಡ್ಬಿ | ಮೊಣಕೈ | ಕೌಣಿ |
| ತಲೆಬುರುಡೆ | ಸಿರ್ | ಕತ್ತು | ಗರದನ್ |
| ಗರ್ಭ | ಪೇಟತೇ | ಗರ್ಭಾಶಯ | ಪೋಟ್ಟಿ |
| ಮೀಸೆ | ಮಾಚ್ | ಗಡ್ಡ | ದಾಡಿ |
| ಗಂಟಲು | ಗಾಲ | ತೊಡೆ | ಪಟ್ಟ |
| ಮಂಡಿ | ಕಂದ್ರೋ | ಚರ್ಮ | ಖಾಲ |
| ಮುಖ | ಮು | ಎದೆ | ಚಾತಿ |
| ಹೊಟ್ಟೆ | ಪೇಟ್ | ನಾಲಿಗೆ | ಜೇಬ |
| ಅಂಗಾಲು | ಹತ್ತಳಿ | ಮುಸುಡಿ | ಜಬಾಡೇ |
| ಹಲ್ಲು | ದಾತ್ | ಮೆದಳು | ಮಿಗ್ಗಿ, ಬೇಜಾ |
| ಉಗುರು | ಚಲ್ಲಾ | ಹೊಳ್ಳೆ | ನತ್ತನಿ |
| ಮೂಗು | ನಾಕ್ | ನಾಡಿ | ನಸ್ |
| ಹೊಕ್ಕಳು | ತುಂಡ್ಡಿ | ರೆಪ್ಪೆ | ಪಲಕ್ |
| ಪಕ್ಕೆಲುಬು | ಬೂಕಡಾ | ಪಿತ್ತ | ಬೇಲಕಮಂ |
| ಬೆನ್ನು | ಪೀಟ್ | ಮಾಂಸಖಂಡ | ಸಕಾರ |
| ಪಾದ | ಪೇರ | ಕೂದಲು | ಬಾಲ |
| ಹುಬ್ಬು | ಬಾಹರೇ | ವಸಡು | ಜಾಡ್ |
| ಮುಷ್ಠಿ | ಮುಖ್ಖಾ | ನರ | ನಸ್ |
| ಹಣೆ | ಮತ್ತೋ | ಬೆನ್ನಲುಬು | ಕಂಗಡ್ |
| ಜೋಲು | ಜೇಬ | ರಕ್ತ | ಲವ್ |
| ಮೂಳೆ | ಹಡ್ಡಿ | ಹೃದಯ | ದಿಲ್ಲ್ |
| ಕೈ | ಹಾತ್ | ಅಂಗೈ | ಹತಳಿ |

| ಕನ್ನಡ | ಸಿಕ್ಲಿಗ ಭಾಷೆ | ಕನ್ನಡ | ಸಿಕ್ಲಿಗ ಭಾಷೆ |
|---|---|---|---|
| **ರೋಗಗಳು ದೇಹದ ಸ್ಥಿತಿಗಳು** | | | |
| ಅಜೀರ್ಣ | ಹಜಮ್ | ಕುರುಡು | ಅಂದೋ |
| ದೃಷ್ಟಿ | ನಜರ್ | ಅಂಡವಾಯು | ಚೀರ್ |
| ಕಣ್ಣೀರು | ಅನ್ನಸೂ | ಕಫ | ಖಾಸಿ |
| ವಾಂತಿ | ಉಲಟಿ | ಕಾಮಾಲೆ | ಕಾಮಣಿ |
| ಕಜ್ಜಿ | ಕುಜಲಿ | ಕೆಮ್ಮು | ಧಮ್ಮ |
| ರಕ್ತಹೀನತೆ | ಲವುಕೋನಿ | ತಲೆಸುತ್ತುವುದು | ಸೀರ್ ಗುಮರೋ |
| ಸೀನುವುದು | ಚೀಕ್ | ನೆಗಡಿ | ಸರದಿ |
| ಉಗುಳು | ದುಕ್ | ಉಬ್ಬಸ | ಧಮ್ಮ |
| ನೋವು | ದರದ್ | ಮಲ | ಗಡವಾಲೇಖಗೌವ |
| ಹೊಟ್ಟೆನೋವು | ಪೇಟದುಕರೋ | ತಲೆನೋವು | ಸಿರದುಕರೋ |
| ನಿದ್ರೆ | ನಿದ | ಬೆವರು | ಗರಮಿ |
| ಹುಚ್ಚು | ಪಾಗಲ್ | ಕೀವು | ವ್ಯರೋ |
| ಬಾಯರಿಕೆ | ಬಾಸ್ | ಮೊಡವೆ | ಕೀಲ್ |
| ಗುಳ್ಳೆ | ಗುಬ್ಬಡಿ | ಕುಳ್ಳ | ಗಿಡ್ಡೋ |
| ಮಚ್ಚೆ | ತೀಲ್ | ಬಿಗಿಹಿಡಿತ | ದಬಾಕಪಕಡೋ |
| ರೋಗ | ಬೇಮಾರ | ಕುಂಟ | ಲಂಗಡೋ |
| ಡೆಂಗಿಜ್ವರ | ಡೆಂಗಿಜ್ವರ | ಶೀತಜ್ವರ | ಕಣಸ್ |
| ಊತ | ಸುಜನ್ | ಧ್ವನಿ | ಅವಾಜ್ |
| ಆರೋಗ್ಯವಂತ | ಅಜ್ಜೊ | ಬಿಕ್ಕಳಿಕೆ | ಹಿಚಿಕಿ |
| **ಮರಗಳು, ಹೂವು, ಹಣ್ಣು ಮತ್ತು ಭಾಗಗಳು** | | | |
| ಮಾವಿನ ಮರ | ಆಮಕಜಾಡ | ಹುಣಸೆಮರ | ಅಮಲಿಕೀ ಜಾಡ |
| ಮರ | ಜಾಡ್ | ಮುಳ್ಳು | ಕಾಟೋ |
| ಆಲದಮರ | ಪಿಪಲ್‌ಕಾ ಜಾಡ್ | ಬಿದುರು | ಬಾಸಕೀ ಲಕಡಿ |
| ಬೋಜಪತ್ರ | ಕಾಣಕೋ ಬ್ಯಲಾಯೋ | ಮರದ ತೊಗಟೆ | ಬಕ್ಕುಲ್ |
| ಸಿಪ್ಪೆ | ಸಿಲಕಾ | ತಾಳೆಮರ | ಖಿರ್ಜುರ ಜಾಡ್ |
| ಕೊಂಬೆ | ಡಾಳಿ | ಕಾಂಡ | ಜಡ್ಗ |
| ಎಲೆ | ಪತ್ತಾ | ಹೂವು | ಫೂಲ್ |
| ರಸ | ರಸ್ | ಶುಂಠಿ | ಶೋಠ |
| ದಾಳಿಂಬೆ | ಅನಾರ | ದ್ರಾಕ್ಷಿಹಣ್ಣು | ಅಂಗುರು |
| ಅಂಜೂರ | ಅಂಜೂರ | ಮಾವು | ಆಮ |

| ಕನ್ನಡ | ಸಿಕ್ಲಿಗ ಭಾಷೆ | ಕನ್ನಡ | ಸಿಕ್ಲಿಗ ಭಾಷೆ |
|---|---|---|---|
| ಕಬ್ಬು | ಗನ್ನೋ | ಆಲುಗಡ್ಡೆ | ಅಲ್ಲು |
| ಹುಣಸೆ | ಇಮ್ಮಾಲಿ | ಕುಂಬಳಕಾಯಿ | ಕಂದ್ದು |
| ಹಾಗಲಕಾಯಿ | ಕರೆಲಾ | ಬಾಳೆಹಣ್ಣು | ಕೇಳಾ |
| ಸೇವಂತಿಗೆ | ಸೇವಂತಿಪೂಲ್ | ಗುಲಾಬಿ | ಗುಲಾಬಿ |
| ಬೀಜ | ಬೀಜ್ಜಾ | ಗಸಗಸೆ | ಕಸಕಸ್ |
| ಹುಲ್ಲು | ಗಾಸ್ | ತುರಾಯಿ | ತೂರಿ |
| ಮಲ್ಲಿಗೆ | ದವಳೇಪೂಲ್ | ಪಡವಲಕಾಯಿ | ಸಾಪಪಳಿ |
| ಸಂಪಿಗೆ | ಸಂಪಾಕಪೂಲ್ | ತಂಬಾಕು | ಜರದಾ |
| ಕಲ್ಲಂಗಡಿ | ಕಲ್ಗಂಡಾ | ತೆಂಗಿನಕಾಯಿ | ನಾರೆಲ್ಲ್ |
| ನಿಂಬೆಹಣ್ಣು | ಲಿಂಬು | ಎಲೆಕೋಸು | ಗೋಬಿ |
| ವೀಳ್ಯೆದೆಲೆ | ಕಚಚಾಪಾನ್ | ಮೆಣಸಿನಕಾಯಿ | ಮೀಚಾ |
| ಸೀತಾಫಲ | ಸೀತಾಫಲ | ಪುದೀನಾ | ಪುದಿನಾ |
| ಈರುಳ್ಳಿ | ಕಾದಾ | ಹೂಕೋಸು | ಪೂಲ್‌ಗೋಬಿ |
| ಬಾದಾಮಿ | ಬದಾಮ | ಬೆಂಡಿಕಾಯಿ | ಬೆಂಡಿ |
| ನೆಲಗಡಲೆಕಾಯಿ | ಸೇಂಗಾ | ಮೂಲಂಗಿ | ಮಾಳಿ |
| ಮೂಸಂಬಿ | ಮೊಸಂಬಿ | ಗೆಣಸು | ರತಾಳು |
| ಹತ್ತಿ | ಕಪಾಸ್ | ಬೆಳ್ಳುಳ್ಳಿ | ಲಸಾಣ |
| ಹಿಪ್ಪು ನೇರಳೆ | ಜಮ್ಮಣ | ಸೇಬು | ಸೇಬು |
| **ವೇಷಭೂಷಣ** | | | |
| ಕುಪ್ಪಸ | ಜಪ್ಪರ್ | ಕಂಬಳಿ | ಕಂಬಳ್ |
| ಜರತಾರಿಬಟ್ಟೆ | ರೇಷ್ಮಾಕಪಡಾ | ಕೋಟು | ಕೋಟು |
| ಪ್ಯಾಂಟು | ಫಲಟೋನ್ | ಲಂಗ | ಗಗರಿ |
| ಬುರಕಿ | ಬುರುಕಾ | ಗಾದಿ | ಗಾದ್ದಿ |
| ಹೊದಿಕೆ | ಚದ್ದರ್ | ಒಳಗಿನಚಡ್ಡಿ | ಕಚ್ಚಾ |
| ಜೇಬು | ಕೀಸಾ | ಟೋಪಿ | ಟೋಪ್ಪಿ |
| ಶಾಲು | ಮಾವಲ್ಸ್ | ಮಕಮಲ್ | ಕಮಮಲ್ |
| ಕರವಸ್ತ್ರ | ಧಸ್ತಿ | ಉಡಿದಾರ | ತಾಗಡಿ |
| ಅಂಗಿ | ಕುಡತಾ | ಪೇಟಾ | ರೂಮಾಲ |
| ನೂಲು | ತಾಗೋ | | |
| **ಬಾಂಧವ್ಯ** | | | |
| ಅತಿಥಿ | ಪೈಣೆ | ಅಧ್ಯಾಪಕ | ಮಾಸ್ತರ್ |
| ಮಾಮ | ಮಾಮ | ಉಪಪತ್ನಿ | ದೂಸರಿ ಬೈಯರ್ |

| ಕನ್ನಡ | ಸಿಕ್ಲಿಗ ಭಾಷೆ | ಕನ್ನಡ | ಸಿಕ್ಲಿಗ ಭಾಷೆ |
|---|---|---|---|
| ಚಿಕ್ಕಪ್ಪ | ಚಾಚಾ | ತಾತ | ದಾದ |
| ಅಜ್ಜಿ | ದಾದಿ | ಅಳಿಯ | ಜವಾಯಿ |
| ಮಿತ್ರ | ದೊಸ್ತ | ತಾಯಿಯ ತಂದೆ | ನಾನಾ |
| ತಾಯಿಯ ತಾಯಿ | ನಾನಿ | ಗಂಡ | ಮರದ್ |
| ಹೆಂಡತಿ | ಅವರತ್ | ಭಾವಮೈದುನ | ಸಾಲಾ |
| ಸೊಸೆ | ಭೌವ | ಮಗ | ಬೇಟಾ |
| ಮಗಳು | ಬೇಟಿ | ಪ್ರೀತಿ | ಪ್ಯಾರ್ |
| ತಂಗಿ | ಬಾಹನ್ | ಸೋದರ | ಬೈಯಿ |
| ಸೋದರತ್ತೆ | ಮಾಮಿ | ಚಿಕ್ಕಮ್ಮ | ಮೌಸಿ |
| ಗುರು | ಮಹಾರಾಜ | ಶಿಷ್ಯ | ಚೆಲ್ಲಾ, ಚೇಲಾ |
| ಅತ್ತೆ | ಸಾಸು | ಸಂಬಂಧಿಕ | ರಿಸ್ಥೆದಾರ |
| ಮಲಮಗ | ಸವತ್ತನ ಬೇಟಾ | ಮಲಮಗಳು | ಸವತ್ತನ ಬೇಟಿ |
| ಮಲತಂದೆ | ಸವತ್ತನ ಬಾಪ | ಮಲತಾಯಿ | ಸವತ್ತನ ಮಾ |

**ಕಟ್ಟಡ ಮತ್ತು ಅದರ ಭಾಗಗಳು**

| | | | |
|---|---|---|---|
| ಅಸ್ಪತ್ರೆ | ದವಾಖಾನ | ಕಟ್ಟಡ | ಬಾನಾಕಾಮ |
| ಅನಾಥಾಲಯ | ಅನಾಥಾಶ್ರಮ | ಕಿಡಕಿ | ಕಿಡಕಿ |
| ಗುಮ್ಮಟ | ಗುಮಂಜ್ | ಮಾಳಿಗೆ | ಸೂಪ |
| ಗುಡಿಸಲು | ಜೋಪಡಿ | ಸರಪಳಿ | ಸಂಕಳ್ |
| ನೆಲಮಾಳಿಗೆ | ಜಮೀನ ಗರ್ | ಬಾಗಿಲು | ದರವಾಜೋ |
| ಕಚೇರಿ | ಆಫೀಸ್ | ಹೊಸ್ತಿಲು | ಚೌಕಟ್ |
| ಬಚ್ಚಲು | ನಾಹಣಿ | ಕಲ್ಲು | ಪತ್ತರ್ |
| ಚರಂಡಿ | ನಾಳಿ | ನೆಲ | ಜಿಗಾ |
| ಕಾರ್ಖಾನೆ | ಕಾರ್ಖಾನೋ | ಅಂಗಳ | ಪಟಾಂಗಣ |
| ಬಂಗಲೆ | ಬಂಗಲಾ | ಸಾಮಾನು | ರಾಚ್ |
| ಮನೆ | ಗರ್ | ದೇವಸ್ಥಾನ | ಮಂದಿರ |
| ಮಸೀದಿ | ಮಜ್ಜಿತ್ | ಅರಮನೆ | ಮಹೆಲ್ |
| ಕಾಲೇಜು | ಕಾಲೇಜು | ಸ್ಥಂಭ | ಕಂಬ |
| ಶಾಲೆ | ಪಾಠಶಾಳಾ | ಮೆಟ್ಟಿಲು | ಪವಡಿ |

**ಮನೆಬಳಕೆ ವಸ್ತುಗಳು**

| | | | |
|---|---|---|---|
| ಅಲ್ಮಾರ | ಅಲ್ಮಾರಿ | ಒನಕೆ | ಸೋಟ್ಟಾ |
| ಇದ್ದಲು | ಕೊಳಸಾ | ಅಗ್ಗಿಷ್ಟಿಕೆ | ಗಡಗಿ |

| ಕನ್ನಡ | ಸಿಕ್ಲಿಗ ಭಾಷೆ | ಕನ್ನಡ | ಸಿಕ್ಲಿಗ ಭಾಷೆ |
|---|---|---|---|
| ಉರುಳು | ಪುಖಿಣಿ | ಕಬ್ಬಿಣ | ಪತ್ರಾ |
| ಸೌದೆ | ಲಕ್ಕಡಿ | ಕಡಾಯಿ | ಕಡಾಯಿ |
| ಸೌಟು | ಕಡಚಿ | ಬಾಚಣಿಕೆ | ಕಗ್ಗಾ |
| ರೊಟ್ಟಿಡಬ್ಬಿ | ರೋಟಿಕಾ ಟೋಕ್ರಿ | ಚಾಪೆ | ಚವಾಯಿ |
| ಚಮಚ | ಚಮಚಾ | ಜರುಡಿ | ಚಾಣಿ |
| ಬೀಗದಕೈ | ಚಾವೀ | ಕೊಡೆ | ಛತ್ರಿ |
| ಜಾಲಿ | ಚಾಳಿ | ಪರಕೆ | ಪರಕಾ |
| ಬುಟ್ಟಿ | ಟೊಕರಾ | ಪೆಟ್ಟಿಗೆ | ಪೆಟ್ಟಿ |
| ಮುಚ್ಚಳ | ಢಕ್ಕಣ | ದಿಂಬು | ಶಾಣು |
| ಮಂಚ | ಮಂಚೋ | ಬಟ್ಟಲು | ಬಿಲ್ಲೊ |
| ತಕ್ಕಡಿ | ತ್ರಾಜು | ಬಟ್ಟಲತಟ್ಟೆ | ಬೆಲ್ಲು |
| ತಂತಿ | ತಾರ್ | ಬೀಗ | ಕುಲಫ್ |
| ತಿಜೋರಿ | ಅಲ್ಮಾರಿ | ತಟ್ಟೆ | ತಾಳೀ |
| ಕನ್ನಡಿ | ಸೀಸೋ | ಕಡ್ಡಿಪೆಟ್ಟಿಗೆ | ಕಾಡಕಬ್ಬಿ |
| ಹಲ್ಲುಪುಡಿ | ಮಂಜನ್ | ದಾರ | ತಾಗೋ |
| ಬಟ್ಟಲು | ಬೆಲ್ಲು | ಗಡಿಗೆ | ಮಗ್ಗಾ |
| ಲಟ್ಟಣಿಗೆ | ಬೆಲ್ಲನಾ | ಶೀಷೆ | ಶಿಷಿ |
| ಗೋಣಿಚೀಲ | ಪೊತಾ | ಕಡೆಗೋಲು | ಇಳಾ |
| ಮೊಂಬತ್ತಿ | ಮೇಣಬತ್ತಿ | ಪಾತ್ರೆ | ಥಾಳೀ |
| ಹಗ್ಗ | ರಸೀ | ನೂಲುದಾರ | ದಗ್ಗೋ |
| ದೀಪ | ದೀಪೋ | ಭೋಗಣಿ | ಬೋಗಣಾ |
| ಅಡಿಕೆ ಕತ್ತರಿ | ಅಡಕೀತ್ತಾ | ಸಾಬೂನು | ಸಬ್ಬನ್ |
| ತಂಬಿಗೆ | ಗಡವಾ | | |
| ಆಭರಣಗಳು | | | |
| ಉಂಗುರ | ಚಲ್ಲಾ | ಕಡಗ | ಖಡೋ |
| ಸರ | ಮಾಲಾ | ಬೆಂಡೋಲೆ | ಕಾನಿಕೀ ಜುಬ್ಬಿ |
| ಬೆಳ್ಳಿ | ಚಾಂದಿ | ಹಿಡಿಕೆ | ಚುಮಟಾ |
| ಬಳೆ | ಚೂಡಿ | ತೋಡೆ | ಪಟ್ಟಿ |
| ಡಾಬು | ತಾಗಡಿ | ಅಲ್ಯುಮಿನಿಯಂ | ಜರ್ಮನ್ |
| ಮಾಲೆ | ಹಾರ್ | ಮುತ್ತು | ವಜ್ರ |
| ಕಾಲುಂಗುರ | ಜೋಡವಾ | | |

| ಕನ್ನಡ | ಸಿಕ್ಲಿಗ ಭಾಷೆ | ಕನ್ನಡ | ಸಿಕ್ಲಿಗ ಭಾಷೆ |
|---|---|---|---|
| **ವೃತ್ತಿಗಳು** | | | |
| ಗೌಳಿಗಿತ್ತಿ | ದುದವಾಳೋ | ರೈತ | ಕೀಸಾನದಾರ್ |
| ಜವಾನ | ನೌಕರ | ಲೇಖಕ | ಲೀಖನವಾಳೋ |
| ಖಜಾಂಚಿ | ಪೈಸಾವಾಳೋ | ಜಮೀನ್ದಾರ | ಜಮೀನವಾಳೋ |
| ಚಮ್ಮಾರ | ಚಮ್ಮರ್ | ಎಣ್ಣೆ ವ್ಯಾಪಾರಿ | ತೇಲ್‌ಬೇಚನೋವಾಳೋ |
| ದರ್ಜಿ | ಟೈಲರ್ | ಸೂಲಗಿತ್ತಿ | ದಾಯಿ |
| ದಂತವೈದ್ಯ | ದಾತ್ಸಕೂ ಡಾಕ್ಟರ್ | ಅಂಗಡಿದಾರ | ದುಕನಾವಾಳೋ |
| ನೃತ್ಯಗಾರ | ನಾಚನೇವಾಳೋ | ನಾಟಕಕಾರ | ನಾಟಿಕವಾಳೋ |
| ಪುರೋಹಿತ | ಪೂಜಾರಿ | ಬಡಗಿ | ಲಕಡಿ |
| ನೀರಿನವ | ಪಾಣೀವಾಳೋ | ಭಿಕ್ಷುಕ | ಭಿಕಾರಿ |
| ಮಾಲೀಕ | ಮಾಲಿಕಸಾಬ | ತೋಟಗಾರ | ಕೋತ್ತವಾಳೋ |
| ಕಮ್ಮಾರ | ಲವ್ಮಾರ್ | ವಕೀಲ | ವಕೀಲ್ |
| ವೈದ್ಯ | ಡಾಕ್ಟರ್ | ಕ್ಷೌರಿಕ | ಹಜಾಮ |
| **ಪ್ರಾಣಿಗಳು** | | | |
| ನಾಯಿ | ಕುತ್ತಾ | ಹೆಣ್ಣುನಾಯಿ | ಕುತ್ತಿ |
| ಹೇಸರಗತ್ತೆ | ಗದ್ದಾ | ಮೊಲ | ಖರಗೋಶ್ |
| ಕತ್ತೆ | ಕಚ್ಚರ್ | ಹಸು | ಆಯೀ |
| ಅಳಿಲು | ಕಾಬೋ | ಕುದುರೆ | ಗೋಡಾ |
| ಚಿರತೆ | ಹಸುಲ್ | ಮುಂಗಸಿ | ಮಂಗಸು |
| ಬಾಲ | ಪುಚ್ | ಪಶು | ಜನಿವರ್ |
| ಪಂಜ | ಪಂಜೋ | ಮೇಕೆ | ಸಿಂಗ್ |
| ಕರು | ಬಚ್ಚಡಾ | ಹೆಣ್ಣುಕುರಿ | ಬಚ್ಚಡಿ |
| ಬೆಕ್ಕೆ | ಬಿಲ್ಲಿ | ಬೆಕ್ಕಿನಮರಿ | ಬಿಲ್ಲಿಕಾ ಬಚ್ಚಾ |
| ಕೋತಿ | ಬಾಂದರ್ | ವಾನರ | ಬಂದರ್ |
| ಹುಲಿ | ಭಾಗ್ | ಸಾರಂಗ | ಹರನ್ |
| ಹೆಣ್ಣುಜಿಂಕೆ | ಹರನೀ | ಎತ್ತು | ಗಾಯಿ |
| ಕರಡಿ | ರೀಚ್ | ತೋಳ | ಕೋಲಾ |
| ಕುರಿ | ಬಕರಾ | ಎಮ್ಮೆ | ಬ್ಯೆಯಿಸ್ |
| ಟಗರು | ಟಗರು | ಇಲಿ | ಚೋವ್ವೋ |
| ನರಿ | ಗಿದ್ದಡ್ | ಸಿಂಹ | ಶೇರ್ |
| ಹಂದಿ | ಸೂರ | ಚಿಗರೆ | ಹರನೀ |
| ಆನೆ | ಹತಿ | ಮೊಸಳೆ | ಮಗರ್ |

| ಕನ್ನಡ | ಸಿಕ್ಲಿಗ ಭಾಷೆ | ಕನ್ನಡ | ಸಿಕ್ಲಿಗ ಭಾಷೆ |
|---|---|---|---|
| **ಹುಳುಗಳು ಮತ್ತು ಕೀಟಗಳು** | | | |
| ಹೆಬ್ಬಾವು | ದೋಮಡಿಕಾ ಸಾಪ | ಕಡಲಾಮೆ | ಕಚ್ಚು |
| ನಾಗರಹಾವು | ನಾಕ್‌ಸಾಪ | ಏಡಿ | ಕೊಕಡಾ |
| ತಿಗಣೆ | ಡಾಸ್ | ಹಲ್ಲಿ | ಕೋಡ್‌ಕಿಳ್ಳಿ |
| ವಿಷ | ಜೇರ್ | ವಿಷದ ಹಲ್ಲು | ಜೇರ್‌ದಾತ್ |
| ಹೇನು | ಜೂ | ಚಿಟ್ಟೆ | ಬಿಂಗ್ಗರಿ |
| ಹೆಡೆ | ಪಣ್ | ಚೇಳು | ಬಿಚ್ಚು |
| ನೋಣ | ಮಕ್ಕಿ | ಜೇಡನ ಬಲೆ | ಮಕೋಡಿ |
| ಸೊಳ್ಳೆ | ಮಚ್ಚರ್ | ಮೀನು | ಮಚ್ಚಿ |
| ನಳ್ಳಿ | ಕೇಕಡಾ | ಕಪ್ಪೆಮರಿ | ದಡ್ಡಿಬಚ್ಚಾ |
| ಮುತ್ತಿನಚಿಪ್ಪು(Œ | ಚೀಪ್ಪಿ | ಮೊಟ್ಟೆ | ಅಂಡಾ |
| ಪಾರಿವಾಳ | ಕಬುತರ್ | ಮರಕುಟುಕ | ಜಾಡುಕಾತಿ |
| ಸಂಬಾರ ಕಾಗೆ | ಕಾಗ್ಗಾ | ಕೋಗಿಲೆ | ಕೋಯಿಲ್ಲ್ |
| ಕಾಗೆ | ಕವ್ವಾ | ಹದ್ದು | ಚೀಲ್ |
| ರಣಹದ್ದು | ಬಾಜ್ | ಗುಬ್ಬಚ್ಚಿ | ಚೀಡಿ |
| ಗೂಡು | ಗರ್ | ಬಾವಲಿ | ಬಗ್ಗಳ್ |
| ಕೌಜುಹಕ್ಕಿ | ತಿತ್ತರ್ | ಗಿಳಿ | ತೋತ್ತರ್ |
| ರೆಕ್ಕೆ | ಬಚ್ಚು | ಗರಿ | ಬುಚ್ಚಿ |
| ಬಾತುಕೋಳಿ | ಬತ್ತಕ್ | ಕೋಳಿ | ಮುರಗಿ |
| ನವಿಲು | ಮೋರ್ | ಹುಂಜು | ಮುರಗಾ |
| **ವಾರದ ಏಳು ದಿನಗಳು** | | | |
| ಸೋಮವಾರ | ಸೋಮ್ಮಾರ್ | ಮಂಗಳವಾರ | ಮಂಗಳ್ |
| ಬುಧವಾರ | ಬುದ್ | ಗುರುವಾರ | ಬೀರವಾರ |
| ಶುಕ್ರವಾರ | ಜುಮ್ಮಾ | ಭಾನುವಾರ | ಅತ್ತವಾರ |
| **ಸಂಖ್ಯೆಗಳು** | | | |
| ಒಂದು | ಎಕ್ | ಎರಡು | ದೋ |
| ಮೂರು | ತೀನ್ | ನಾಲ್ಕು | ಚಾರ್ |
| ಐದು | ಪಾಚ್ | ಆರು | ಚೇ |
| ಏಳು | ಸಾತ್ | ಎಂಟು | ಆಟ್ |
| ಒಂಭತ್ತು | ನೌವ | ಹತ್ತು | ದಸ್ |
| ಹನ್ನೊಂದು | ಗಾರಾ | ಹನ್ನೆರೆಡು | ಭಾರಾ |
| ಹದಿಮೂರು | ತೋರಾ | ಹದಿನಾಲ್ಕು | ಚವಟಾ |

| ಕನ್ನಡ | ಸಿಕ್ಲಿಗ ಭಾಷೆ | ಕನ್ನಡ | ಸಿಕ್ಲಿಗ ಭಾಷೆ |
|---|---|---|---|
| ಹದಿನೈದು | ಪದ್ಧರಾ | ಹದಿನಾರು | ಸೋಳಾ |
| ಹದಿನೇಳು | ಸತ್ತರಾ | ಹದಿನೆಂಟು | ಆಟರಾ |
| ಹತ್ತೊಂಭತ್ತು | ಒನ್ನಿಸ್ | ಇಪ್ಪತ್ತು | ಬೀಸ್ |
| ಮೂವತ್ತು | ತೀಸ್ | ನಲವತ್ತು | ಚಾಲಿಸ್ |
| ಐವತ್ತು | ಪಚಾಸ್ | ಅರವತ್ತು | ಸಾಂಟ್ |
| ಎಪ್ಪತ್ತು | ಸತ್ತಾರ್ | ಎಂಭತ್ತು | ಆಸಿ, ಚಾರಬಿಸ್ |
| ತ್ತೊಂಭತ್ತು | ನವಂದ್ | ನೂರು | ಸೌವ |
| ಇನ್ನೂರು | ದೋಸೌವ | ಮೂನ್ನೂರು | ತೀನ್‌ಸೌವ |
| ನಾನೂರು | ಚಾರ್‌ಸೌವ | ಐದುನೂರು | ಪಾಚ್‌ಸೌವ |
| ಆರುನೂರು | ಚೇಸೌವ | ಏಳುನೂರು | ಸಾತ್‌ಸೌವ |
| ಎಂಟುನೂರು | ಆಟ್‌ಸೌವ | ಒಂಭೈನೂರು | ನವಸೌವ |
| ಹತ್ತು ಸಾವಿರ | ದಸ್ ಹಜಾರ್ | ಲಕ್ಷ | ಲಾಖ |
| ಒಂದು ಕೋಟಿ | ಏಕ್ ಕರೋಡ್ | ಹತ್ತು ಕೋಟಿ | ದಸ್‌ಕರೋಡ್ |
| **ಕ್ರಮವಾಚಕಗಳು** | | | |
| ಒಂದನೆಯದು | ಪೇಲೂ | ಎರಡನೆಯದು | ದೋವಿಕೋ |
| ಮೂರನೆಯದು | ತೀನ್‌ವಿಕೋ | ನಾಲ್ಕನೆಯದು | ಚಾರ್‌ವಿಕೋ |
| ಐದನೆಯದು | ಪಾಚ್‌ವಿಕೋ | ಆರನೆಯದು | ಚೇವೂ |
| ಏಳನೆಯದು | ಸಾತವ್ಗೋ | ಎಂಟನೆಯದು | ಆಟೋವ್ಗೋ |
| ಒಂಭತ್ತನೆಯ | ನವ್ಗೋ | ಹತ್ತನೆಯ | ದಸ್ತವ್ಗೋ |
| **ಧಾನ್ಯಗಳು ಮತ್ತು ಖಾದ್ಯಪದಾರ್ಥಗಳು** | | | |
| ಬೆಣ್ಣೆ | ಮಕ್ಕನ್ | ಬಟಾಣಿ | ಚನ್ನಾ |
| ಕೆನೆ | ಮಲಾಯಿ | ಮಾಂಸ | ಡಳಿ |
| ಭತ್ತ | ದಾನ್ | ಮೈದಾ | ಮೆದ್ದಾ |
| ಸಾಸಿವೆ | ರಾಯಿ | ಅವಲಕ್ಕಿ | ಅವಲಕ್ಕಿ |
| ಸಕ್ಕರೆ | ಸಕ್ಕರ್ | ಜೋಳ | ಜುವಾರ್ |
| ಗೋಧಿ | ಗೌವ | ಸಾರು | ಲಗುವಾಣ |
| ತರಕಾರಿ | ತರಕಾರಿ | ಎಣ್ಣೆ | ತೇಲ್ |
| ಮೊಸರು | ದಹೀ | ಬೆಳೆಕಾಳು | ಫಲಲ್ |
| ಹಾಲು | ದೂದು | ಸಜ್ಜೆ | ಬಾಜರೋ |
| ಆಹಾರ | ಕಾಣೋ | ಹಿಟ್ಟು | ಆಟಾ |
| ಉದ್ದು | ಮಕ್ಕಿದಾಳ್ | ಪಲ್ಯ | ಬಾಜೀ |

| ಕನ್ನಡ | ಸಿಕ್ಲಿಗ ಭಾಷೆ | ಕನ್ನಡ | ಸಿಕ್ಲಿಗ ಭಾಷೆ |
|---|---|---|---|
| ಕಾಫಿ | ಕಾಫಿ | ಕಡಲೆ | ಚನಕಾದಾಲ್ |
| ಅನ್ನ | ಚಾವಲ್, ಬಾತ್ | ಚಹ | ಚಹಾ |
| ಚಪಾತಿ | ಪೋಳಿ | ಗಿಣ್ಣು | ಚಾಚ್ |
| ರೊಟ್ಟಿ | ರೊಟಿ | ಬಿಳಿಸಾಸಿವೆ | ರಾಯಿ |
| ಏಲಕ್ಕಿ | ಇಲಾಚಿ | ಶುಂಠಿ | ಶೂಂಠ |
| ಮೆಣಸು | ಕಾಲಿಮೀರಿ | ಕಾಚು | ಕಾ |
| ಕರಿಜೀರಿಗೆ | ಕರಿಪತ್ತಾ | ಗಂಧಕ | ಗಂಧ |

## ೯

# ಸಮಸ್ಯೆ ಸಂಘಟನೆ ಪರಿಹಾರ

### ಆರ್ಥಿಕ ಸ್ಥಿತಿ–ಗತಿ

ಜಾಗತೀಕರಣ, ಖಾಸಗೀಕರಣ, ಉದಾರೀಕರಣ, ಔದ್ಯೋಗೀಕರಣ ಮುಂತಾದವುಗಳಿಂದಾಗಿ ಕುಶಲಕರ್ಮಿ ಸಮುದಾಯಗಳ ಮೇಲೆ ತುಂಬಾ ಕೆಟ್ಟ ಪರಿಣಾಮಗಳಾಗಿವೆ. ಇಂದು ಸಿಕ್ಲಿಗರು(ಕಮ್ಮಾರ) ತಯಾರಿಸಿದ ಉತ್ಪನ್ನವು ಕೂಡ ಯಾರೂ ಖರೀದಿಸದ ಸ್ಥಿತಿಗೆ ಬಂದುನಿಂತಿವೆ. ದೇಸಿಯತೆ ನೆಲಕಚ್ಚಿದೆ. ಆ ಕಾರಣಕ್ಕಾಗಿ ಸಿಕ್ಲಿಗರ ಗೃಹ ಬಳಕೆಯ ವಸ್ತುಗಳಿಗೆ ಬೆಲೆ ಇಲ್ಲದಂತಾಗಿದೆ. ಅವರ ಬದುಕು ಮುಂದೇನು? ಎಂಬ ಪ್ರಶ್ನೆಯಿಂದಲೆ ಆರಂಭವಾಗುತ್ತದೆ. ಕ್ಷಿಪ್ರ ಗತಿಯಲ್ಲಿ ಬದಲಾಗುತ್ತಿರುವ ಇಂದಿನ ಸಮಾಜದ ಸ್ಥಿತಿ ಇಂತಹ ಸಮುದಾಯಗಳ ಮೇಲೆ ಶಾಪವಾಗಿ ಪರಿಣಮಿಸಿದೆ.

ಸಿಕ್ಲಿಗರು ಆರ್ಥಿಕವಾಗಿ ಹೇಳತೀರದಷ್ಟು ಬಡವರು ಅವರು ವಾಸಿಸುವ ಸ್ಥಳ, ತೊಡುವ ವೇಷಭೂಷಣ, ಮಾಡುವ ಕಾರ್ಯಗಳನ್ನು ನೋಡಿದಾಕ್ಷಣ ಅವರ ಆರ್ಥಿಕ ಪರಿಸ್ಥಿತಿಯ ಅರಿವು ಸಹಜವಾಗಿ ಮೂಡುವುದು ಸ್ವಾಭಾವಿಕವಾಗಿದೆ. ಈ ಸಮುದಾಯವು ಎರಡೊತ್ತಿನ ಊಟಕ್ಕೂ ಗತಿಯಿಲ್ಲದೇ ಗಂಜಿಗಾಗಿ ದಿಕ್ಕಿಲ್ಲದೇ ಪರದಾಡುವ ಪರಿಸ್ಥಿತಿ ಉಂಟಾಗಿದೆ.

ಇವರಿಗೆ ಕಬ್ಬಿಣದ ಕೆಲಸವನ್ನು ಬಿಟ್ಟರೇ ಮತ್ಯಾವ ಕೆಲಸ ಗೊತ್ತೇ ಇಲ್ಲ. ಬಹು ಸಂಖ್ಯಾತರಿಗೆ ವಾಸಿಸಲು ಮನೆಗಳಿಲ್ಲ. ಸರ್ಕಾರದ ಜಾಗಗಳಲ್ಲಿ ನೆಲೆಸಿದ್ದಾರೆ. ಸರ್ಕಾರಕ್ಕೆ ಸಂಬಂಧಿಸಿದ್ದವರೂ ಒಂದು ವೇಳೆ ಬಂದರೆ ಅವರು ಗುಡಿಸಲು ಕಿತ್ತುಕೊಂಡು ಹೋಗುವ ಪರಿಸ್ಥಿತಿ ಉಂಟಾಗುವುದು. ಇಂತ ಸ್ಥಿತಿಯಲ್ಲಿ ತಮ್ಮ ಜೀವನವನ್ನು ಕಳೆಯುತ್ತಿದ್ದಾರೆ. ಕೃಷಿ ಪಶುಪಾಲನೆಯಂತೂ ಅವರಿಗೆ ಗೊತ್ತೆ ಇಲ್ಲ. ಹಂದಿ ಸಾಕಾಣಿಕೆಯನ್ನು ಕೈಗೊಂಡ ಕೆಲವು ಕುಟುಂಬಗಳಿವೆ. ಹೀಗಾಗಿಯೇ ಇಲ್ಲಿ ಶ್ರೇಣೀಕೃತ ವ್ಯವಸ್ಥೆ ಯಾವ ಯಾವ ಕೆಲಸಗಳನ್ನು ಮಾಡಬೇಕೆಂದು ತಾನೇ ರೂಪಿಸಿಕೊಂಡಿದ್ದರಿಂದ ಆಯಾ ಕೆಲಸಗಳೇ ಇವರಿಗೆ ಕಟ್ಟಪ್ಪಣೆಯಾದವು. ಸಾಮಾಜಿಕ ಗುಂಪುಗಳು ಸಹಿತ ಚಾರಿತ್ರಿಕವಾದ ಘಟ್ಟಗಳಲ್ಲಿ ತಮ್ಮಷ್ಟಕ್ಕೆ ತಾವೇ ರೂಪಿಸಿಕೊಂಡ ವ್ಯವಸ್ಥೆಯಲ್ಲಿ ಸಾಧನೆಗೆ ಸಿಕ್ಕ ಸೋಲು ಗೆಲುವುಗಳನ್ನೇ ಅವಲಂಭಿಸಲಾಯಿತ್ತು. ಸೋಲನ್ನು ಒಪ್ಪಿಕೊಂಡ

ಸಮುದಾಯಗಳಂತೂ ಹೇಳದೇ ತಮಗೆ ವಹಿಸಿದ ಕೆಲಸಕಾರ್ಯಗಳನ್ನು ತಾವೇ ಒಪ್ಪಿಕೊಂಡು ಮೂಕವೇದನೆಯಿಂದ ನಿರ್ವಹಿಸಿಕೊಂಡು ಬರುವವಾದವು. ಅವು ಅವರಿಗೆ ಕೆಟ್ಟಕೆಲಸದ ಬುತ್ತಿಗಳಾದವು.

ಕುಲಕಸಬು ಕೈಗೊಂಡ ಸಿಕ್ಲಿಗರು ಕೇವಲ ಜಾತಿ ಆಧಾರದ ಮೇಲೆ ಪ್ರಸ್ತಾವವಾದವು. ಕೆಲವು ಜಾತಿಗೆ ಸೀಮಿತವಾದ ಕೆಲವು ಬುಡಕಟ್ಟುಗಳು ಹೊಂದಿದ್ದರೂ ಸಾಮಾಜಿಕ ಅವಮಾನಗಳನ್ನು ಮೀರಿಲ್ಲ. ಆರ್ಥಿಕ ಸ್ಥಿತಿಯಲ್ಲಿ ಇದೇ ಸ್ಥಿತಿ ಅನುಭವಿಸಬೇಕಾಯಿತು.

ಭಾರತದ ಸಮಾಜದಲ್ಲಿ ಮಾನವನನ್ನು ಶ್ರೇಣೀಕೃತ ವ್ಯವಸ್ಥೆಗೆ ನಿಲ್ಲಿಸಿದೆ. ಅದಕ್ಕೆ ವಿಶಿಷ್ಟವಾದ ಸ್ಥಾನಮಾನಗಳು ಪ್ರಾಪ್ತವಾಗಿವೆ. ಜಾಗತಿಕ ಮಟ್ಟದಲ್ಲಿ ಹಲವಾರು ಉತ್ಪಾದನಾ ಕ್ರಾಂತಿಗಳು ನಡೆದುಕೊಂಡು ಬಂದರೂ ಸಹ ಭಾರತ ದೇಶ ಮಾತ್ರ ತಮ್ಮ ತಮ್ಮಲ್ಲಿನ ಆರ್ಥಿಕ ಅವಲಂಬನೆಯನ್ನು ಕಾಯ್ದುಕೊಂಡು ಬರಹತ್ತಿವೆ. ಇದರಿಂದ ಅಲೆಮಾರಿ ವೃತ್ತಿಗಳಾದ ಸಿಕ್ಲಿಗರ ಅವರು ಹೊರತಾಗಿಲ್ಲ. ತಮ್ಮದೇಯಾದ ಸಾಂಪ್ರದಾಯಿಕ ಆರ್ಥಿಕ ಮೂಲವನ್ನು ಉಳಿಸಿಕೊಂಡು, ಬೆಳೆಸಿಕೊಂಡು ಹಾಗೇ ಕಾಪಾಡಿಕೊಂಡು ಬಂದವರಲ್ಲಿ ಸಿಕ್ಲಿಗರು ಮುಖ್ಯವಾಗಿರುವರು.

ಸಿಕ್ಲಿಗರು ನೂರಾರು ಸಮಸ್ಯೆ ಸವಾಲುಗಳನ್ನು ಎದುರಿಸಬೇಕಾಗಿದೆ. ಆ ಸಮಸ್ಯೆ ಸವಾಲುಗಳ ಸ್ಥಿತಿಗತಿ ಅರಿತಾಗಲೇ ಸಿಕ್ಲಿಗರ ಬದುಕಿನ ಆರ್ಥಿಕತೆ ತಿಳಿದುಕೊಳ್ಳಲು ಬರುತ್ತದೆ. ಇವರ ಆರ್ಥಿಕ ಬದುಕಿನಲ್ಲಿ ಸಂಭವಿಸಬಹುದಾದ ರೂಪಾಂತರಗಳಲ್ಲಿ ಅನೇಕಗಳನ್ನು ಹುಡುಕಿ ಸೂಕ್ಷ್ಮ ದಾಖಲೆಗಳನ್ನು ಒದಗಿಸಬೇಕಾದ ಅನಿವಾರ್ಯತೆಯಿದೆ. ಇಂತಹ ಕೊರತೆಗಳನ್ನು ತುಂಬಿಕೊಳ್ಳಲು ಸಾಕಷ್ಟು ಪ್ರಯತ್ನಿಸಬೇಕಾಗಿದೆ.

ಸಿಕ್ಲಿಗರ ಸಮುದಾಯವು ಅಲೆಮಾರಿ ಬುಡಕಟ್ಟು ಸಮುದಾಯವಾಗಿದೆ. ಅಲೆಮಾರಿಗಳ ಮೂಲ ಪುರುಷ ಒಂದೇಯಾಗಿ ಕಂಡುಬರುತ್ತಾರೆ.

### ರಾಜಕೀಯ ಸ್ಥಿತಿಗತಿ

ಸಿಕ್ಲಿಗರ ರಾಜಕೀಯ ಸ್ಥಿತಿ ಅಷ್ಟೇನು ತೃಪ್ತಿದಾಯಕವಾದುದಲ್ಲ. ಸಿಕ್ಲಿಗರಲ್ಲಿ ಗ್ರಾಮ ಪಂಚಾಯತಿ ಮಟ್ಟದಲ್ಲಿ ಹಾಗೂ ಆದರಾಚಗೆ ನಗರಸಭೆ, ತಾಲೂಕು ಪಂಚಾಯತಿ, ಜಿಲ್ಲಾ ಪಂಚಾಯತಿ ಹಾಗೂ ರಾಜ್ಯ ಮತ್ತು ರಾಷ್ಟ್ರೀಯ ಮಟ್ಟದಲ್ಲಿ ಇವರು ರಾಜಕೀಯವಾಗಿ ಪ್ರವೇಶಪಡೆಯಲು ಇಂದಿಗೂ ಸಾಧ್ಯವಾಗುತ್ತಿಲ್ಲ. ಪ್ರಾಯಶಃ ಸಿಕ್ಲಿಗರು ಅಲ್ಪಸಂಖ್ಯಾತರಾಗಿರುವುದೇ ಇದಕ್ಕೆ ಕಾರಣ ಇರಬಹುದು. ರಾಜಕೀಯವಾಗಿ ಇವರಿಗೆ ಯಾವುದೇ ಅಧಿಕಾರ ಸಿಗದೆ ಇರುವುದರಿಂದ ಇವರು ಸಾಮಾಜಿಕವಾಗಿ ಪ್ರಗತಿ ಹೊಂದಲು ಸಾಧ್ಯವಾಗುತ್ತಿಲ್ಲವೇನೊ. ಇಂದಿಗೂ ಈ ಸಮುದಾಯದ ಎಷ್ಟೋ ಜನ ಮತದಾರರ ಪಟ್ಟಿಯಿಂದಲೆ ಹೊರಗೆ ಉಳಿದಿದ್ದಾರೆ.

**ಕೋಷ್ಟಕ: ೯.೧ ಸಿಕ್ಕಿಗರ ಮತದಾನದ ಸೌಲಭ್ಯ**

| ವಿವರ | ಪುರುಷ | ಮಹಿಳೆ | ಒಟ್ಟು |
|---|---|---|---|
| ಮತದಾನ ಮಾಡಲು ಅರ್ಹರ ಗುಂಪು | ೪೧೬ | ೩೯೮ | ೮೧೪ |
| ಮತದಾರರ ಗುಂಪು | ೧೬೯ | ೧೧೧ | ೨೮೦ |
| ಮತದಾರ ಪಟ್ಟಿಗೆ ಸೇರದ ಗುಂಪು | ೨೪೭ | ೨೮೭ | ೫೪೪ |

ಸಿಕ್ಕಿಗರಲ್ಲಿ ಇಂದಿಗೂ ಮತದಾರರ ಪಟ್ಟಿಗೆ ಸೇರದ ಎಷ್ಟೋ ಜನ ಕಂಡು ಬರುತ್ತಾರೆ. ಸಮೀಕ್ಷೆ ಮಾಡಿದವರಲ್ಲಿ ಮತದಾರರ ಪಟ್ಟಿಯಲ್ಲಿರುವವರ ಪ್ರಮಾಣ ಶೇ. ೩೩.೧೭ಇದೆ. ಮತದಾರರ ಪಟ್ಟಿಯಲ್ಲಿಲ್ಲದವರ ಪ್ರಮಾಣ ಶೇ. ೬೬.೮೩ರಷ್ಟಿದೆ.

### ಶೈಕ್ಷಣಿಕ ಸ್ಥಿತಿಗತಿ

ಸಿಕ್ಕಿಗರು ಮೂಲತಃ ಅಲೆಮಾರಿಗಳು, ನಿತ್ಯದ ಬದುಕೇ ಮುಖ್ಯವಾಗಿರುವ ಇವರಿಗೆ ಶಿಕ್ಷಣ ಅಷ್ಟೇನೂ ಮಹತ್ವದ್ದಾಗಿ ಕಂಡುಬರುತ್ತಿಲ.

ಇತ್ತೀಚಿನ ದಿನಗಳಲ್ಲಿ ಪ್ರಜ್ಞಾವಂತರಾಗಿರುವ ಸಿಕ್ಕಿಗರು ತಮ್ಮ ಮಕ್ಕಳನ್ನು ಶಾಲೆಗೆ ಕಳಿಸಲು ಹೆಚ್ಚು ಉತ್ಸಾಹ ತೋರುತ್ತಿರುವುದು ಆಶಾದಾಯಕ ವಿಚಾರವೆಂದೇ ಹೇಳಬಹುದು. ಸಮೀಕ್ಷೆಗೆ ಒಳಪಟ್ಟವರಲ್ಲಿ ಸಾಕ್ಷರತೆಗೆ ಅರ್ಹವಾದವರು ಶೇ. ೮೯.೯೧ರ ಪ್ರಮಾಣದಲ್ಲಿದ್ದಾರೆ. ಆದರೆ ಸಾಕ್ಷರರ ಪ್ರಮಾಣ ೩೨.೫೭ರಷ್ಟು ಮಾತ್ರ ಕಂಡುಬರುತ್ತದೆ.

**ಕೋಷ್ಟಕ: ೯.೨ ಸಿಕ್ಕಿಗರ ಸಾಕ್ಷರತಾ ಪ್ರಮಾಣ**

| ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|
| ಸಾಕ್ಷರತೆ ಹೊಂದಲು ಅರ್ಹವಾದವರು | ೭೫೨ | ೬೮೨ | ೧೪೩೪ |
| ಸಾಕ್ಷರತೆ ಹೊಂದಿದವರು | ೨೬೬ | ೨೧೧ | ೪೭೭ |
| ನಿರಕ್ಷರಿಗಳು | ೪೮೬ | ೪೮೧ | ೯೬೭ |

**ಶಿಕ್ಷಣದ ಸ್ಥಿತಿಗತಿ :** ಆದರೆ ಇತ್ತೀಚಿನ ದಶಕಗಳಲ್ಲಿ ಸಿಕ್ಕಿಗರು ಒಂದು ಕಡೆ ನೆಲೆನಿಲ್ಲುತ್ತಿದ್ದಾರೆ. ಇವರಲ್ಲಿಯೂ ಶಿಕ್ಷಣದ ಕುರಿತು ಅರಿವುಂಟಾಗುತ್ತಿದೆ. ಹೀಗಾಗಿ ಈಚೆಗೆ ವಿದ್ಯಾಭ್ಯಾಸದಲ್ಲಿ ತೊಡಗಿದವರ ಸಂಖ್ಯೆ ಈ ಸಮುದಾಯದಲ್ಲಿ ಹೆಚ್ಚಾಗಿ ಕಂಡುಬರುತ್ತಿದೆ. ಸಾಕ್ಷರತೆ ಹೊಂದಿದ ಸಿಕ್ಕಿಗರಲ್ಲಿ ಮೆಟ್ರಿಕ್ ಪೂರ್ವ ಶಿಕ್ಷಣ ಪಡೆದವರ ಪ್ರಮಾಣ ೯೮.೫೦ಇದೆ. ಆದರೆ ಮೆಟ್ರಿಕ್ ನಂತರದ ಶಿಕ್ಷಣ ಪಡೆದವರ ಪ್ರಮಾಣ ೧.೫೦ಮಾತ್ರ ಇದೆ. ಅಂದರೆ ಉನ್ನತ ಶಿಕ್ಷಣಕ್ಕೆ ಹೋದಂತೆಲ್ಲ ಸಿಕ್ಕಿಗರಲ್ಲಿ ಓದುವವರ ಪ್ರಮಾಣ ಕಡಿಮೆಯಾಗಿದೆ. ಮಾಧ್ಯಮಿಕ, ಪ್ರೌಢ ಶಿಕ್ಷಣ ಹೊಂದಿದವರಿಗಿಂತ ಪ್ರಾಥಮಿಕ ಶಿಕ್ಷಣ ಹೊಂದಿದ ಮಕ್ಕಳು ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ನಾಲ್ಕು ಐದನೇ ತರಗತಿಗೆ

ಬರುವಷ್ಟರಲ್ಲಿ ಮಕ್ಕಳನ್ನು ನಾನಾ ಕಾರಣಗಳಿಗಾಗಿ ಶಾಲೆ ಬಿಡಿಸುವುದರಿಂದ ಮುಂದಿನ ವಿದ್ಯಾಭ್ಯಾಸವನ್ನು ಮಕ್ಕಳು ಪೂರೈಸಲು ಸಾಧ್ಯವಾಗುವುದಿಲ್ಲ.

ಕೋಷ್ಟಕ: ೯.೩ ಸಿಕ್ಲಿಗರ ಶೈಕ್ಷಣಿಕ ಸ್ಥಾನ ಮಾನ (೨೦೦೭)

| ಸಂ. | ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೦೧ | ಪ್ರಾಥಮಿಕ | ೧೫೦ | ೧೧೦ | ೨೬೦ |
| ೦೨ | ಮಾಧ್ಯಮಿಕ | ೭೭ | ೬೨ | ೧೩೯ |
| ೦೩ | ಪ್ರೌಢಶಾಲೆ | ೩೫ | ೨೬ | ೬೧ |
| ೦೪ | ಪಿಯುಸಿ | ೨ | ೩ | ೫ |
| ೦೫ | ಇತರ | ೨ | – | ೨ |
| | ಒಟ್ಟು | ೨೬೬ | ೨೦೧ | ೪೬೭ |

ವಿಧವಾವೇತನ ಸೌಲಭ್ಯ

ವಿಧುರರು ೧೫ ಮತ್ತು ವಿಧವರೆಯರು ೨೫ ಜನರಿದ್ದಾರೆ. ಆದರೆ ಕೇವಲ ೦೮ ಜನ ವಿಧವೆಯರು ಮಾತ್ರ ವಿಧವಾವೇತನ ಪಡೆಯಲು ಸಾಧ್ಯವಾಗಿದೆ.

ಕೋಷ್ಟಕ: ೯.೪ ಸಿಕ್ಲಿಗರ ವಿಧವಾವೇತನ ಸೌಲಭ್ಯ

| ಸಂ. | ವಿವರ | ಸಂಖ್ಯೆ |
|---|---|---|
| ೦೧ | ವಿಧವೆಯರು | ೨೫ |
| ೦೨ | ವಿಧವಾ ವೇತನ ಪಡೆಯುವರು | ೦೮ |

ಅನಕ್ಷರಸ್ಥ ಮಹಿಳೆಯರಿಗೆ ತಿಳುವಳಿಕೆಯ ಕೊರತೆಯಿಂದಾಗಿ ವಿಧವಾ ವೇತನ ಪಡೆಯಲು ಸೋತಿದ್ದಾರೆ.

ವೃದ್ಧಾಪ್ಯವೇತನ

೬೦ ಹಾಗೂ ಅದಕ್ಕಿಂತಲೂ ಮೇಲ್ಪಟ್ಟ ವಯೋಮಾನದ ಹಿರಿಯರಿಗೆ ವೃದ್ಧಾಪ್ಯ ವೇತನವನ್ನು ಸರ್ಕಾರ ನೀಡುತ್ತದೆ. ೬೦ ವರ್ಷಕ್ಕಿಂತ ಮೇಲ್ಪಟ್ಟು ವೃದ್ಧರಲ್ಲಿ ಪುರುಷರು ೨೫ ಹಾಗೂ ಮಹಿಳೆಯರು ೨೨ ಒಟ್ಟು ೪೭ ಜನರಿದ್ದಾರೆ. ಆದರೆ ವೃದ್ಧಾಪ್ಯ ವೇತನ ಪಡೆಯುವಲ್ಲಿ ವಿಫಲರಾಗಿದ್ದಾರೆ. ಅಜ್ಞಾನ ಹಾಗೂ ಬಡತನದಲ್ಲಿರುವ ನಿರ್ಗತಿಕ ವೃದ್ಧರಿಗೆಂದು ನಿಗದಿ ಮಾಡಿದ ಈ ಸೌಲಭ್ಯ ಪಡೆಯುವಲ್ಲಿಯೂ ಸಿಕ್ಲಿಗರು ವಂಚಿತರಾಗಿರುವುದು ಕಂಡುಬರುತ್ತದೆ.

**ಆಧುನಿಕ ಸಂದರ್ಭದಲ್ಲಿ ಸಿಕ್ಲಿಗರು**

ಇಂದಿನ ದಿನಗಳಲ್ಲಿ ನಾವೆಲ್ಲ ಅತ್ಯಂತ ಸಂಕೀರ್ಣವಾದ ಸ್ಥಿತ್ಯಂತರ ಸ್ಥಿತಿಯಲ್ಲಿ ಬದುಕನ್ನು ಕಾಣುತ್ತಲಿದ್ದೇವೆ. ನಮ್ಮ ಮೇಲೆ ಜವಾಬ್ದಾರಿ ಜೊತೆಗೆ ಒತ್ತಡಗಳು ದಿನದಿನಕ್ಕೆ

ಹೆಚ್ಚಾಗುತಿವೆ. ಇಂತಹ ಒತ್ತಡಗಳಿಗೆ ಕಾರಣವಾದದ್ದು ಜಾಗತೀಕರಣವಾಗಿದೆ. ಜಾಗತೀಕರಣವೆಂಬ ಹೆಸರಿನ ಮೂಲಕ ಪೆಡಂಭೂತ ಹೊಕ್ಕರೆ ಒಳಗಿನಿಂದಲೇ ನಮ್ಮ ರಾಜಕಾರಣ ಕುಲಕಸಬುಗಳನ್ನು ಇಕ್ಕಟ್ಟಿಗೆ ಸಿಲುಕಿಸಿದೆ. ಈ ಹೊತ್ತಿನ ಸಂದರ್ಭದಲ್ಲಿ ಅಲೆಮಾರಿ ಸಮುದಾಯಗಳ ಕಲೆಗಳನ್ನು ವರ್ತಮಾನದ ಕಾಲದಲ್ಲಿಟ್ಟು ಹೇಗೆ ಸಹ್ಯವಾಗಿಸಿಕೊಳ್ಳಬೇಕೆಂಬ ಆಲೋಚನೆಯಲ್ಲಿ ಗಂಭೀರವಾದ ಚಿಂತನೆ ಮಾಡಬೇಕಾಗಿದೆ. ಈ ಚಿಂತನೆ ವರ್ತಮಾನವನ್ನು ಗಮನದಲ್ಲಿಟ್ಟುಕೊಂಡು ನಾವು ನಮ್ಮ ಚರಿತ್ರೆ, ನಮ್ಮ ಸಂಸ್ಕೃತಿ, ಚಿಂತನೆಗಳು ಹೇಗೆ ಬೆಳೆದುಬಂದವೆಂಬುದನ್ನು ಗಮನಿಸಬೇಕು. ಈ ಹಿನ್ನೆಲೆಯಲ್ಲಿಯೇ ಇವತ್ತಿನ ದಿನಮಾನಗಳಲ್ಲಿ ಸಿಕ್ಲಿಗರ ಸಮುದಾಯ ಸ್ಥಿತಿಗತಿ ಏನಾಗಿದೆ ಎಂಬುದರ ಕುರಿತು ಚಿಂತಿಸಬೇಕಾಗಿದೆ. ಸಿಕ್ಲಿಗರ ಸಾಮಾಜಿಕ ಸ್ಥಾನಮಾನಗಳ ನಿರ್ಣಾಯಕವಾದ ಜೀವನವನ್ನು ಕಾಣುವುದು ಮುಖ್ಯವಾಗಿದೆ. ಸಿಕ್ಲಿಗರ ಸಮುದಾಯ ಸರ್ಕಾರದ ಯೋಜನೆಗಳನ್ನು ಪಡೆಯಲು ಆಗುತ್ತಿಲ್ಲ. ಅಲ್ಲಲ್ಲಿ ಮಾತ್ರ ಅಂದರೆ ಉತ್ತರ ಕರ್ನಾಟಕದ ಬೆಳಗಾಂವ, ಧಾರವಾಡ, ನಿಪ್ಪಾಣಿ, ಹುಬ್ಬಳ್ಳಿ, ಶಿಗ್ಗಾಂವ, ಗದಗ, ಕೊಪ್ಪಳ ಜಿಲ್ಲೆಗಳಲ್ಲಿ ಮಾತ್ರ ಸರ್ಕಾರದ ಆಶ್ರಯ ಮನೆಗಳು ದೊರಕಿವೆ. ಅವುಗಳಲ್ಲಿ ಜೀವನ ಸಾಗಿಸುತ್ತಿದ್ದಾರೆ. ಎಲ್ಲೋ ಹಲವು ಕಡೆ ಕ್ವಚಿತ್ತಾಗಿ ವಿದ್ಯುತ್ ಬಳಸುತ್ತಿದ್ದಾರೆ. ಪಡಿತರ ಚೀಟಿ, ಮತದಾನದ ಚೀಟಿಗಳು ಬೆರಳೆಣಿಕೆಯಷ್ಟು ಜನರ ಕುಟುಂಬಕ್ಕೆ ದೊರೆತಿವೆ. ವ್ಯಾಪಾರಕ್ಕೆಂದು ಹಲವು ಸಂತೆ ಹಾಗೂ ಸುತ್ತಮುತ್ತಲ ಪ್ರದೇಶದ ಬೇಕು ಬೇಡಿಕೆಗಳನ್ನು ಅರಿತುಕೊಂಡು ಆ ಕಡೆಗೆ ಹೋಗಿ ಕೆಲಸ ನಿರ್ವಹಿಸಿಕೊಂಡು ಬರುತ್ತಲಿದ್ದಾರೆ.

ಗುಡಾರ, ಟಿಣ್ ಮನೆ ಹಾಕಿಕೊಂಡು ಗುಡಿಸಲುಗಳ ಜೀವನೋಪಾಯದಲ್ಲಿದ್ದಾರೆ. ಅತ್ಯಂತ ನೋವಿನ ಸಂಗತಿಯೆಂದರೆ ಕೊಳಚೆ ಪ್ರದೇಶದಂತಹ ಹೊಲಸು ಚರಂಡಿ ಶೌಚಾಲಯಗಳ ಹತ್ತಿರ ವಾಸಮಾಡುತ್ತಾರೆ.

ಬಹಳಷ್ಟು ಕುಟುಂಬಗಳು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸದೇ ತಮ್ಮಲ್ಲಿಯೇ ಇಟ್ಟುಕೊಂಡು ಅವರಿಗೆ ಕಬ್ಬಿಣದ ಕೆಲಸ ಮಾಡಲು ಹಚ್ಚುತ್ತಾರೆ. ಹರೆಯಕ್ಕೆ ಬಂದಾಗಲೇ ಅವರಿಗೆ ವಿವಾಹ ಮಾಡಿ ಬೇರೆ ಹೊಸ ಕುಟುಂಬ ನಿರ್ವಹಿಸುವಂತೆ ಸೂಚಿಸುತ್ತಾರೆ. ಇಂದಿನ ಬದಲಾದ ಶೈಕ್ಷಣಿಕ ವ್ಯವಸ್ಥೆಗೆ ಅನುಗುಣವಾಗಿ ಈ ಸಮುದಾಯ ಹೊಂದಿಕೊಳ್ಳಬೇಕಾದ ಅನಿವಾರ್ಯತೆ ಇದೆ. ಇಂದಿಗೂ ಸಿಕ್ಲಿಗರ ಸಮುದಾಯ ಚಿಂತಾಜನಕ ಸ್ಥಿತಿ ಅನುಭವಿಸಬೇಕಾಗಿದೆ.

ಸಿಕ್ಲಿಗರ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಬೆಂಗಳೂರಿನ ಶ್ರೀ ಬಲಬೀರಸಿಂಗ್ ಪಾವಾ ಅವರು ಪ್ರತಿವರ್ಷ ಮಕ್ಕಳಿಗೆ ಸಮವಸ್ತ್ರ ಪಠ್ಯಪುಸ್ತಕಗಳನ್ನು ನೀಡುವ ಮೂಲಕ ಉಚಿತ ಶಿಕ್ಷಣಕ್ಕೆ ಆಯಾ ಸ್ಥಳಗಳಲ್ಲಿ ವ್ಯವಸ್ಥೆ ಮಾಡಿದ್ದಾರೆ. ಹೀಗಾಗಿ ಹಲವು ಮಕ್ಕಳು ಇತ್ತೀಚೆಗೆ ಶಿಕ್ಷಣವನ್ನು ಪಡೆಯುತ್ತಿದ್ದಾರೆ.

ಈ ಸಮುದಾಯ ಪ್ರಜ್ಞಾವಂತರಾಗಬೇಕು ಅದಕ್ಕಾಗಿ ಸರ್ಕಾರದ ವಿವಿಧ ಯೋಜನೆಗಳು ಸೌಲತ್ತುಗಳನ್ನು ಪಡೆಯಬೇಕಾಗಿದೆ. ಇವೆಲ್ಲಕ್ಕಿಂತ ಮೊದಲು ಸರಕಾರದ ಜಾಗಗಳಲ್ಲಿ

ವಸತಿಗಾಗಿ ಸ್ಥಳವನ್ನು ನೀಡಬೇಕು. ಅಂಬೇಡ್ಕರ್, ಇಂದಿರಾ ಅವಾಜ್, ಆಶ್ರಯ ಹಾಗೂ ಕೊಳಚೆ ಪ್ರದೇಶಗಳ ಯೋಜನೆಗಳ ಮನೆಗಳನ್ನು ಕಟ್ಟಿಕೊಡುವ ಕೆಲಸ ಮಾಡಬೇಕಾಗಿದೆ. ಅವರಿಗೆ ಇದರಿಂದ ನೆಲೆ ನಿಲ್ಲಲು ಸಾಧ್ಯವಾಗುತ್ತದೆ. ವಿದ್ಯುತ್ ಹಾಗೂ ನೀರು ಸರಬರಾಜು ಶೌಚಾಲಯಗಳ ನಿರ್ಮಾಣವಾಗಬೇಕಾಗಿದೆ.

ಶೈಕ್ಷಣಿಕ ಅಭ್ಯಾಸ ಕೊಡುವುದಲ್ಲದೆ ಪಡಿತರ ಚೀಟಿ ಒದಗಿಸಬೇಕು. ಚುನಾವಣೆಯಲ್ಲಿ ಮತದಾನ ಮಾಡಲು ಗುರುತಿನ ಚೀಟಿ ನೀಡಬೇಕು.

**ಪರಿಹಾರೋಪಾಯಗಳು**

೧. ಸಿಕ್ಲಿಗರ (Sikligar) ಎನ್ನುವ ಸಮುದಾಯವು ದಿಲ್ಲಿ, ಹರಿಯಾಣ, ಹಿಮಾಚಲ ಪ್ರದೇಶ, ಪಂಜಾಬ ಮತ್ತು ಚಂಡಿಗಡಗಳಲ್ಲಿ ಪರಿಶಿಷ್ಟ ಜಾತಿಯ ಮೀಸಲಾತಿ ಪಟ್ಟಿಯಲ್ಲಿರುವುದು. ಹರಿಯಾಣದಲ್ಲಿ ಇವರನ್ನು ಬರಿಯಾ(Bariya) ಎಂತಲು ಕರೆಯುವರು. ಆದರೆ, ಕರ್ನಾಟಕ ರಾಜ್ಯದ ಯಾವುದೇ ಮೀಸಲಾತಿ ಪಟ್ಟಿಯಲ್ಲಿ ಇದುವರೆಗೂ ಸಿಕ್ಲಿಗರ ಸಮುದಾಯವನ್ನು ದಾಖಲಿಸಲಿಲ್ಲ. ಹೀಗಾಗಿ ಸಂವಿಧಾನಬದ್ಧ ಹಕ್ಕಿನಿಂದ ವಂಚಿತರಾಗಿದ್ದಾರೆ. ಕರ್ನಾಟಕದಲ್ಲಿಯ ಇವರನ್ನು ಮೀಸಲಾತಿಯ ಪರಿಶಿಷ್ಟರ ಪಟ್ಟಿಗೆ ಸೇರಿಸಿ ಸಂವಿಧಾನಬದ್ಧ ಹಕ್ಕನ್ನು ನೀಡಬೇಕು.

೨. ಇವರ ಸಮಗ್ರ ಶಿಕ್ಷಣಕ್ಕಾಗಿ ಇವರ ಮಾತೃಭಾಷೆಯ ಹಿನ್ನೆಲೆಯಲ್ಲಿ ವಿಶೇಷ ಯೋಜನೆಗಳನ್ನು ಸರಕಾರ ರೂಪಿಸಿ ಅನುಷ್ಠಾನಗೊಳಿಸಬೇಕು.

೩. ಆರ್ಥಿಕ ಭದ್ರತೆಗಾಗಿ ಇವರ ಕುಲಕಸುಬುಗಳ ಹಿನ್ನೆಲೆಯಲ್ಲಿ ವಿಶೇಷ ಯೋಜನೆಗಳನ್ನು ಸಮಾಜ ಮತ್ತು ಸರಕಾರ ರೂಪಿಸಿ ಅನುಷ್ಠಾನಗೊಳಿಸಬೇಕು.

೪. ನಿವೇಷನರಹಿತ ಮತ್ತು ಮನೆರಹಿತ ಸಿಕ್ಲಿಗರ ಕುಟುಂಬಗಳಿಗೆ ಸರಕಾರ ಆಶ್ರಯ ಮನೆಗಳನ್ನು ನೀಡುವುದರೊಂದಿಗೆ ಮೂಲಭೂತ ಹಕ್ಕುಗಳನ್ನು ಕಲ್ಪಿಸಬೇಕು.

**ಸಲಹೆಗಳು**

೧. ಕರ್ನಾಟಕದಲ್ಲಿರುವಂತಹ ಸಿಕ್ಲಿಗರು ತಮ್ಮ ಮೂಲಭೂತ ಬೇಡಿಕೆಗಳಿಗಾಗಿ ಸಂಘಟಿತರಾಗಬೇಕು.

೨. ಇವರು ಶಿಕ್ಷಣವನ್ನು ಪಡೆಯಲು ಮುಂದೆ ಬರಬೇಕು

೩. ಸಂಘಟಿತ ಶಿಕ್ಷಣಕ್ಕಾಗಿ ಜಾಗೃತಿವಹಿಸಬೇಕು

೪. ನ್ಯಾಯಯುತವಾದ ಹಕ್ಕುಗಳ ಸಲುವಾಗಿ ದನಿ ಎತ್ತಬೇಕು.

೫. ಕಷ್ಟ ಜೀವಿಗಳಾಗಿ ಬದುಕುತ್ತಿರುವುದಕ್ಕೆ ಬೇರೆ ಮಾರ್ಗೋಪಾಯ ಆಯ್ಕೆ ಮಾಡಿಕೊಳ್ಳಬೇಕು

೬. ಕಬ್ಬಿಣದ ಮೂಲ ಕಸುಬುಗಳ ಜೊತೆಗೆ ವಿವಿಧ ವೃತ್ತಿಪರ ತರಬೇತಿಗಳನ್ನು ಪಡೆಯಬೇಕು

ಕರ್ನಾಟಕದ ಸಿಕ್ಲಿಗರು ಬಹು ಕಷ್ಟ ಜೀವಿಗಳು, ಪ್ರಾಮಾಣಿಕರು. ಇವರ ಮೂಲಭೂತ ಹಕ್ಕುಗಳ ರಕ್ಷಣೆಗಾಗಿ ಎಲ್ಲರೂ ಸಹಕರಿಸಬೇಕಾಗಿದೆ.

ಅಂಕಿಅಂಶಗಳು ೧. ಕರ್ನಾಟಕದ ಸಿಕ್ಲಿಗರ ಸಮುದಾಯದ ನೆಲೆಗಳವಾರು ಮತ್ತು ಜನಸಂಖ್ಯೆ (೨೦೦೭)

| ಜಿಲ್ಲೆ | ತಾಲೂಕು | ನೆಲೆಗಳು | ಕುಟುಂಬ | ಗಂಡು | ಹೆಣ್ಣು | ಒಟ್ಟು |
|---|---|---|---|---|---|---|
| I | II | III | IV | V | VI | VII |
| ಬಾಗಲಕೋಟೆ | | | ೧೮ | ೪೯ | ೩೪ | ೮೩ |
| | ಮುಧೋಳು | ಜಯನಗರ | ೧೮ | ೪೯ | ೩೪ | ೮೩ |
| ಬೆಂಗಳೂರು | | | ೨೭ | ೭೨ | ೬೪ | ೧೩೬ |
| | ಬೆಂಗಳೂರು | ಯಶವಂತಪುರ | ೨೭ | ೭೨ | ೬೪ | ೧೩೬ |
| ಬೆಳಗಾವಿ | | | ೬೦ | ೧೩೬ | ೧೩೧ | ೨೬೭ |
| | ಬೈಲಹೊಂಗಲ | ರೈತಭವನ | ೧೨ | ೩೧ | ೨೮ | ೫೯ |
| | ಬೆಳಗಾವಿ | ರುಕ್ಮಿಣಿ ನಗರ | ೧೪ | ೩೯ | ೩೭ | ೭೬ |
| | ಚಿಕ್ಕೋಡಿ | ಆಶ್ರಯ ನಗರ | ೨ | ೬ | ೪ | ೧೦ |
| | ಗೋಕಾಕ್ | ಆದಿಜಾಂಬು ನಗರ | ೫ | ೧೩ | ೯ | ೨೨ |
| | ನಿಪ್ಪಾಣಿ | ಆಶ್ರಯ ನಗರ | ೨೬ | ೪೩ | ೫೨ | ೯೫ |
| | ರಾಮದುರ್ಗ | ಶ್ರೀಪತಿ ನಗರ | ೧ | ೪ | ೧ | ೫ |
| ಬೀದರ | | | ೩೧ | ೫೬ | ೬೫ | ೧೨೧ |
| | ಔರಾದ | ಔರಾದ | ೬ | ೧೧ | ೧೬ | ೨೭ |

| I | II | III | IV | V | VI | VII |
|---|---|---|---|---|---|---|
| | ಭಾಲ್ಕಿ | ಭಾಲ್ಕಿ | ೪ | ೬ | ೬ | ೧೨ |
| | ಬೀದರ | ಗಾಂಧೀಗಂಜ್ | ೨೦ | ೩೮ | ೪೦ | ೭೮ |
| | ಹುಮನಬಾದ್ | ಹುಮನಬಾದ್ | ೧ | ೧ | ೩ | ೪ |
| ಬಿಜಾಪುರ | | | ೧೩ | ೩೧ | ೩೨ | ೬೩ |
| | ಬಿಜಾಪುರ | ಗೌರಂಕ ನಗರ | ೧೩ | ೩೧ | ೩೨ | ೬೩ |
| ಧಾರವಾಡ | | | ೧೨೪ | ೨೭೧ | ೨೫೪ | ೫೨೫ |
| | ಧಾರವಾಡ | ಲಕ್ಷ್ಮಿ ಸಿಂಗ್‌ಕೆರೆ | ೩೪ | ೮೪ | ೮೪ | ೧೬೮ |
| | ಹುಬ್ಬಳ್ಳಿ | ಅರಳಿಕಟ್ಟೆ | ೧೮ | ೪೪ | ೩೭ | ೮೧ |
| | | ಗುರುಗೋವಿಂದ ನಗರ | ೩೦ | ೫೪ | ೩೨ | ೮೬ |
| | | ಸುಭಾಷ ನಗರ | ೨೬ | ೫೨ | ೬೧ | ೧೧೩ |
| | | ನೇಕಾರ ನಗರ | ೬ | ೧೨ | ೧೯ | ೩೧ |
| | | ಮ್ಯಾಂಗನೀಸ್ ಪ್ಲಾಟ್ | ೧೦ | ೨೫ | ೨೧ | ೪೬ |
| ಗದಗ | | | ೩ | ೬ | ೬ | ೧೨ |
| | ಗದಗ | ದಂಬಾಳನಾಕ | ೩ | ೬ | ೬ | ೧೨ |
| ಗುಲಬರ್ಗಾ | | | ೩೪ | ೭೪ | ೭೨ | ೧೪೬ |
| | ಗುಲಬರ್ಗಾ | ಆಶ್ರಯಕಾಲೋನಿ | ೭ | ೧೭ | ೧೮ | ೩೫ |

| I | II | III | IV | V | VI | VII |
|---|---|---|---|---|---|---|
| | | ಸುಪರ್ ಮಾರ್ಕೆಟ್ | ೨ | ೩ | ೩ | ೬ |
| | | ಪಂಚಶೀಲ ನಗರ | ೧೪ | ೨೭ | ೨೬ | ೫೩ |
| | ಯಾದಗಿರಿ | ಯಾದಗಿರಿ ಸ್ಟೇಷನ್ | ೧೧ | ೨೭ | ೨೫ | ೫೨ |
| ಹಾವೇರಿ | | | ೨೦ | ೪೧ | ೫೨ | ೯೩ |
| | ಶಿಗ್ಗಾಂವ | ಹೌಸಿಂಗ್‌ಬೋರ್ಡ್ ಕಾಲೋನಿ | ೨೦ | ೪೧ | ೫೨ | ೯೩ |
| ಕೊಪ್ಪಳ | | | ೧೩ | ೨೭ | ೨೪ | ೫೧ |
| | ಕೊಪ್ಪಳ | ಬಿ.ಟಿ. ಪಾಟೀಲ ನಗರ | ೩ | ೮ | ೬ | ೧೪ |
| | | ದೇವರಾಜ ಅರಸು ಕಾಲೋನಿ | ೧೦ | ೧೯ | ೧೮ | ೩೭ |
| ಮೈಸೂರು | | | ೧೮ | ೪೩ | ೩೭ | ೮೦ |
| | ಮೈಸೂರು | ಬನ್ನಿಮಂಟಪ | ೧೮ | ೪೩ | ೩೭ | ೮೦ |
| ರಾಯಚೂರು | | | ೧೬ | ೪೫ | ೨೮ | ೭೩ |
| | ಸಿಂಧನೂರು | ಮೆಹಬೂಬಕಾಲೋನಿ | ೮ | ೧೯ | ೧೫ | ೩೪ |
| | | ಹಳೆ ಜನತಾ ಕಾಲೋನಿ | ೮ | ೨೬ | ೧೩ | ೩೯ |
| | | ಒಟ್ಟು | ೩೭೭ | ೮೫೧ | ೭೯೯ | ೧೬೫೦ |

## ಮಾಹಿತಿದರರ ಸೂಚಿ

| ಕ್ರ.ಸಂ | ಹೆಸರು | ವಯಸ್ಸು | ವೃತ್ತಿ | ಊರು |
|---|---|---|---|---|
| ಬೀದರ | | | | |
| ೧ | ಕರ್ತಾರ್‌ಸಿಂಗ/ ಸಾಬಸಿಂಗ | ೩೫ | ಕಬ್ಬಿಣ ಕೆಲಸ | ಬೀದರ |
| ೨ | ಬೀರುಸಿಂಗ/ ಧನಸಿಂಗ | ೩೦ | ಸರಕಾರಿನೌಕರ | ಬೀದರ |
| ೩ | ಜೋಗೇಂದ್ರ ಸಿಂಗ್/ ಹರನಾಮಸಿಂಗ | ೩೦ | ಕಬ್ಬಿಣ ಕೆಲಸ | ಬೀದರ |
| ೪ | ಮಣೀಂದ್ರ ಕೌರ/ ಬೀರುಸಿಂಗ | ೨೦ | ಮನೆ ಕೆಲಸ | ಬೀದರ |
| ೫ | ಧೂಪಾಕಾರ/ ಭಜನ್‌ಸಿಂಗ್ | ೪೦ | ಮನೆ ಕೆಲಸ | ಬೀದರ |
| ೬ | ಕೇಸರ್‌ಬಾಯಿ ಕೌರ್/ಸುಜಾನಸಿಂಗ | ೬೦ | ಕಬ್ಬಿಣ ಕೆಲಸ | ಬೀದರ |
| ೭ | ದೌಲತ್‌ಸಿಂಗ/ ಚಂದುಸಿಂಗ | ೩೬ | ಮನೆ ಕೆಲಸ | ಬೀದರ |
| ೮ | ಸುರೇಕಾಕೌರ/ ಚಂದುಸಿಂಗ | ೩೦ | ಕಬ್ಬಿಣ ಕೆಲಸ | ಬೀದರ |
| ೯ | ಬಭನ್‌ಸಿಂಗ | ೫೦ | ಕಬ್ಬಿಣ ಕೆಲಸ | ಬೀದರ |
| ೧೦ | ಹರನಾಮಸಿಂಗ/ ಧನಸಿಂಗ | ೬೦ | ಕಬ್ಬಿಣ ಕೆಲಸ | ಬೀದರ |
| ಭಾಲ್ಕಿ | | | | |
| ೧ | ಮೌಲನ್‌ಬಾಯಿಕೌರ/ ದಾರಾಸಿಂಗ | ೪೦ | ಮನೆ ಕೆಲಸ | ಭಾಲ್ಕಿ |
| ೨ | ಕೇಸರ್‌ಬಾಯಿಸಿಂಗ/ ಸುಜಾನಸಿಂಗ | ೬೦ | ಮನೆ ಕೆಲಸ | ಭಾಲ್ಕಿ |
| ೩ | ಸೋನಾಕೌರ/ ಠಾಕೂರಸಿಂಗ | ೩೦ | ಮನೆ ಕೆಲಸ | ಭಾಲ್ಕಿ |
| ೪ | ತೇಗದೀರಸಿಮಗ/ ಜಗ್ಗಸಿಂಗ | ೩೫ | ಕಬ್ಬಿಣ ಕೆಲಸ | ಭಾಲ್ಕಿ |
| ೫ | ಬೈಯಂಸಿಂಗ/ ದಾರಾಸಿಂಗ | ೧೯ | ಕಬ್ಬಿಣ ಕೆಲಸ | ಭಾಲ್ಕಿ |
| ಔರಾದ | | | | |
| ೧ | ರಾಠೋಡಸಿಂಗ/ಚರಣಸಿಂಗ | ೫೦ | ಕಬ್ಬಿಣಕೆಲಸ | ಔರಾದ |
| ೨ | ಸೋಮಸಿಂಗ/ಈಶ್ವರಸಿಂಗ | ೨೫ | ಕಬ್ಬಿಣಕೆಲಸ | ಔರಾದ |
| ೩ | ಸುರಜ್‌ಕೌರ/ ಸೋಮಸಿಂಗ | ೨೦ | ಮನೆಕೆಲಸ | ಔರಾದ |
| ೪ | ಕುಲಜೀತ್‌ಸಿಂಗ/ನೆಹನ್‌ಸಿಂಗ | ೨೫ | ಕಬ್ಬಿಣಕೆಲಸ | ಔರಾದ |
| ೫ | ರುಕ್ಕಮ್ಮಿಣಿಕೌರ/ಭಜನ್‌ಸಿಂಗ | ೭೦ | ಕಬ್ಬಿಣಕೆಲಸ | ಔರಾದ |
| ಹುಮನಾಬಾದ | | | | |
| ೧ | ಲಕ್ಕನಸಿಂಗ/ ರಂಜಿಲ್‌ಸಿಂಗ | ೩೫ | ಮನೆಕೆಲಸ | ಹುಮನಾಬಾದ |
| ೨ | ಮಾಯಾಕೌರ/ ಲಕ್ಕನಸಿಂಗ | ೨೫ | ಕಬ್ಬಿಣಕೆಲಸ | ಹುಮನಾಬಾದ |
| ಗುಲ್ಬರ್ಗಾ | | | | |
| ೧ | ಜಗತಸಿಂಗ/ ಸುಕಿಂದ್ರಸಿಂಗ | ೨೩ | ಕಬ್ಬಿಣ ಕೆಲಸ | ಗುಲ್ಬರ್ಗಾ |
| ೨ | ಬಲದೇವಸಿಂಗ/ ನರಸಿಂಗ | ೬೦ | ಕಬ್ಬಿಣ ಕೆಲಸ | ಗುಲ್ಬರ್ಗಾ |

| ಕ್ರಸಂ | ಹೆಸರು | ವಯಸ್ಸು | ವೃತ್ತಿ | ಊರು |
|---|---|---|---|---|
| ೩ | ಸಂತ್‌ಕೌರ್/ ಬಲದೇವಸಿಂಗ | ೫೦ | ಮನೆಕೆಲಸ | ಗುಲ್ಬರ್ಗಾ |
| ೪ | ರೂಪಸಿಂಗ/ ಬಲದೇವಸಿಂಗ | ೨೫ | ಕಬ್ಬಿಣ ಕೆಲಸ | ಗುಲ್ಬರ್ಗಾ |
| ೫ | ಲಾಖನಸಿಂಗ/ ಬಲದೇವಸಿಂಗ | ೩೦ | ಕಬ್ಬಿಣ ಕೆಲಸ | ಗುಲ್ಬರ್ಗಾ |
| ೬ | ಶೇಖರಸಿಂಗ/ ಸುರೇಂದ್ರಸಿಂಗ | ೨೫ | ವಿದ್ಯಾರ್ಥಿ | ಗುಲ್ಬರ್ಗಾ |
| **ಯಾದಗೀರ** | | | | |
| ೧ | ಧರ್ಮಸಿಂಗ/ಸುಂದರಸಿಂಗ | ೬೦ | ಕಬ್ಬಿಣ ಕೆಲಸ | ಯಾದಗೀರ |
| ೨ | ತೇಜಕೌರ/ಧರ್ಮಸಿಂಗ | ೮೦ | ಮನೆಕೆಲಸ | ಯಾದಗೀರ |
| ೩ | ಕೇಕಸಿಂಗ/ಧರ್ಮಸಿಂಗ | ೩೦ | ಕಬ್ಬಿಣಕೆಲಸ | ಯಾದಗೀರ |
| ೪ | ಸರಿತಾಕೌರ/ ಕೇಕಸಿಂಗ | ೨೫ | ಮನೆಕೆಲಸ | ಯಾದಗೀರ |
| ೫ | ಜಗರ್‌ಸಿಂಗ/ಧರ್ಮಸಿಂಗ | ೩೫ | ಕಬ್ಬಿಣಕೆಲಸ | ಯಾದಗೀರ |
| ೬ | ಹೀರಾಸಿಂಗ/ಜಗ್ಗರ್‌ಸಿಂಗ | ೧೮ | ಕಬ್ಬಿಣಕೆಲಸ | ಯಾದಗೀರ |
| **ರಾಯಚೂರು** | | | | |
| ೧ | ಜಗ್ಗರಸಿಂಗ/ರಾಜಾಸಿಂಗ | ೩೫ | ಕಬ್ಬಿಣಕೆಲಸ | ರಾಯಚೂರು |
| ೨ | ಪುನಂಕೌರ/ಮಹೇಂದ್ರಸಿಂಗ | ೩೦ | ಮನೆ ಕೆಲಸ | ರಾಯಚೂರು |
| ೩ | ರಾಜಸಿಂಗ/ಮಹೇಂದ್ರಸಿಂಗ | ೩೨ | ಕಬ್ಬಿಣ ಕೆಲಸ | ರಾಯಚೂರು |
| ೪ | ಭಚ್ಚನಸಿಂಗ/ಮಹೇಂದ್ರಸಿಂಗ | ೨೨ | ಕಬ್ಬಿಣಕೆಲಸ | ರಾಯಚೂರು |
| ೫ | ಕಮಲಾಬಾಯಿಕೌರ/ಮಹೇಂದ್ರಸಿಂಗ | ೫೦ | ಮನೆಕೆಲಸ | ರಾಯಚೂರು |
| **ಸಿಂಧನೂರು** | | | | |
| ೧ | ಲಾಖರಸಿಂಗ/ ಬುಲಾಸಿಂಗ | ೨೪ | ಕಬ್ಬಿಣಕೆಲಸ | ಸಿಂಧನೂರು |
| ೨ | ಜ್ಯೋತಿಕೌರ/ಲಾಖರ್‌ಸಿಂಗ | ೧೮ | ಮನೆಕೆಲಸ | ಸಿಂಧನೂರು |
| ೩ | ಮೇರ್‌ಕೌರ/ಬಾಬುಲಾಲಸಿಂಗ | ೪೫ | ಮನೆಕೆಲಸ | ಸಿಂಧನೂರು |
| ೪ | ಚರಣಸಿಂಗ/ಬಲವಂತಸಿಂಗ | ೭೦ | ಕಬ್ಬಿಣಕೆಲಸ | ಸಿಂಧನೂರು |
| ೫ | ಸಿಕಂದ್ರಸಿಂಗ/ಸರ್ದಾರಸಿಂಗ | ೪೦ | ಕಬ್ಬಿಣಕೆಲಸ | ಸಿಂಧನೂರು |
| ೬ | ಚಂದಾಕೌರ/ಸಿಕ್ಕಂದರಸಿಂಗ | ೩೫ | ಮನೆಕೆಲಸ | ಸಿಂಧನೂರು |
| **ಗದಗ** | | | | |
| ೧ | ಭಗತ್‌ಸಿಂಗ/ಅಮರಸಿಂಗ | ೨೯ | ಕಬ್ಬಿಣಕೆಲಸ | ಗದಗ |
| ೨. | ಲತಾಕೌರ/ಭಗತ್‌ಸಿಂಗ | ೨೫ | ಮನೆಕೆಲಸ | ಗದಗ |
| ೩ | ಲಕ್ಷ್ಮಣಸಿಂಗ/ಅಮರಸಿಂಗ | ೨೭ | ಕಬ್ಬಿಣಕೆಲಸ | ಗದಗ |
| ೪ | ಅಮರಸಿಂಗ/ಬಲವಂತಸಿಂಗ | ೭೫ | ಕಬ್ಬಿಣಕೆಲಸ | ಗದಗ |
| ೫ | ಕಮಲಾಕೌರ/ಅಮರಸಿಂಗ | ೬೫ | ಮನೆಕೆಲಸ | ಗದಗ |
| **ಬಿಜಾಪುರ** | | | | |
| ೧ | ಚಮನಸಿಂಗ/ಲಾಹೋರಸಿಂಗ | ೪೦ | ಕಬ್ಬಿಣಕೆಲಸ | ಬಿಜಾಪೂರ |
| ೨ | ಗಂಗಾಕೌರ/ಚಮನ್‌ಸಿಂಗ | ೩೮ | ಮನೆಕೆಲಸ | ಬಿಜಾಪೂರ |
| ೩ | ತಾರಾಸಿಂಗ/ಸುಂದರಸಿಂಗ | ೭೨ | ಕಬ್ಬಿಣಕೆಲಸ | ಬಿಜಾಪೂರ |
| 4 | ಚರಣಸಿಂಗ/ತಾರಾಸಿಂಗ | ೭೨ | ಕಬ್ಬಿಣಕೆಲಸ | ಬಿಜಾಪೂರ |
| 5 | ಮಜುನುಸಿಂಗ/ತಾರಾಸಿಂಗ | ೫೨ | ಕಬ್ಬಿಣಕೆಲಸ | ಬಿಜಾಪೂರ |

| ಕ್ರಸಂ | ಹೆಸರು | ವಯಸ್ಸು | ವೃತ್ತಿ | ಊರು |
|---|---|---|---|---|
| ಬೆಂಗಳೂರು | | | | |
| ೧ | ಭಾರತ್‌ಸಿಂಗ/ ಬುಜಾರಸಿಂಗ | ೩೬ | ಕಬ್ಬಿಣಕೆಲಸ | ಬೆಂಗಳೂರು |
| ೨ | ಜತನ್‌ಕೌರ/ಭಾರತ್‌ಸಿಂಗ | ೩೦ | ಮನೆಕೆಲಸ | ಬೆಂಗಳೂರು |
| ೩ | ಮಾನಸಿಂಗ/ಜುಂಗರಸಿಂಗ | ೩೫ | ಕಬ್ಬಿಣಕೆಲಸ | ಬೆಂಗಳೂರು |
| ೪ | ಜಿಜಾರಸಿಂಗ/ಲಾಲಾಸಿಂಗ | ೫೦ | ಕಬ್ಬಿಣಕೆಲಸ | ಬೆಂಗಳೂರು |
| ೫ | ರೂಪಸಿಂಗ/ಬಲದೇವಸಿಂಗ | ೨೮ | ಕಬ್ಬಿಣಕೆಲಸ | ಬೆಂಗಳೂರು |
| ೬ | ತೀರ್ಥಸಿಂಗ/ಲಾಲಸಿಂಗ | ೫೮ | ಕಬ್ಬಿಣಕೆಲಸ | ಬೆಂಗಳೂರು |
| ಕೊಪ್ಪಳ | | | | |
| ೧ | ಸರ್ದಾರಸಿಂಗ/ಬಲವಂತಸಿಂಗ | ೮೦ | ಕಬ್ಬಿಣಕೆಲಸ | ಕೊಪ್ಪಳ |
| ೨ | ಅತ್ತರ್‌ಸಿಂಗ/ದಯಾಸಿಂಗ | ೪೦ | ಕಬ್ಬಿಣಕೆಲಸ | ಕೊಪ್ಪಳ |
| ೩ | ಕಮಲಾಕೌರ/ಅತ್ತರಸಿಂಗ | ೩೦ | ಮನೆಕೆಲಸ | ಕೊಪ್ಪಳ |
| ೪ | ಶೇರ್‌ಸಿಂಗ/ಮನೋಹರಸಿಂಗ | ೨೫ | ಕಬ್ಬಿಣಕೆಲಸ | ಕೊಪ್ಪಳ |
| ೫ | ಸಜನಕೌರ/ಮನೋಹರಸಿಂಗ | ೩೦ | ಮನೆಕೆಲಸ | ಕೊಪ್ಪಳ |
| ೬ | ರೂಪಾಕೌರ/ಗುರುದೇವಸಿಂಗ | ೧೮ | ಮನೆಕೆಲಸ | ಕೊಪ್ಪಳ |
| ೭ | ಮೌನಾಕೌರ/ಗುರುದೇವಸಿಂಗ | ೪೦ | ಮನೆಕೆಲಸ | ಕೊಪ್ಪಳ |
| ೮ | ತ್ರಿಲೋಕಸಿಂಗ/ಸರ್ದಾರಸಿಂಗ | ೩೨ | ಕಬ್ಬಿಣಕೆಲಸ | ಕೊಪ್ಪಳ |
| ೯ | ಪ್ರೇಮಜೀತ್‌ಸಿಂಗ/ತ್ರಿಲೋಕಸಿಂಗ | ೩೦ | ಮನೆಕೆಲಸ | ಕೊಪ್ಪಳ |
| ೧೦ | ಧರ್ಮಸಿಂಗ/ಸರ್ದಾರಸಿಂಗ | ೫೦ | ಕಬ್ಬಿಣಕೆಲಸ | ಕೊಪ್ಪಳ |
| ಮೈಸೂರು | | | | |
| ೧ | ಮಾಧುಸಿಂಗ/ದುರ್ಗಾಸಿಂಗ | ೫೫ | ಕಬ್ಬಿಣ ಕೆಲಸ | ಮೈಸೂರು |
| ೨ | ಶಂಕರಸಿಂಗ/ದುರ್ಗಾಸಿಂಗ | ೪೨ | ಕಬ್ಬಿಣಕೆಲಸ | ಮೈಸೂರು |
| ೩ | ಮಾಯಾಕೌರ/ಶಂಕರಸಿಂಗ | ೩೫ | ಮನೆಕೆಲಸ | ಮೈಸೂರು |
| ೪ | ದುರ್ಗಾಸಿಂಗ/ನಿಖಾಸಿಂಗ | ೮೦ | ಕಬ್ಬಿಣಕೆಲಸ | ಮೈಸೂರು |
| ೫ | ರಾಜ್‌ಕೌರ/ ದುರ್ಗಾಸಿಂಗ | ೭೦ | ಮನೆಕೆಲಸ | ಮೈಸೂರು |
| ೬ | ಮಜುನುಸಿಂಗ/ಭಾಲಸಿಂಗ | ೬೦ | ಕಬ್ಬಿಣ ಕೆಲಸ | ಮೈಸೂರು |
| ಧಾರವಾಡ | | | | |
| ೧ | ಅಜೀತ್‌ಸಿಂಗ/ ರಾಣಾಸಿಂಗ | ೩೧ | ಕಬ್ಬಿಣಕೆಲಸ | ಧಾರವಾಡ |
| ೨ | ಅಲ್ಲಿಸಿಂಗ/ಚರಣಸಿಂಗ | ೪೦ | ಕಬ್ಬಿಣಕೆಲಸ | ಧಾರವಾಡ |
| ೩ | ಚರಣಸಿಂಗ/ತಾರಾಸಿಂಗ | ೭೫ | ಕಬ್ಬಿಣಕೆಲಸ | ಧಾರವಾಡ |
| ೪ | ಧಾವಸಿಂಗ/ತಾರಾಸಿಂಗ | ೭೫ | ಕಬ್ಬಿಣಕೆಲಸ | ಧಾರವಾಡ |
| ೫ | ರಮಾಕೌರ/ಮನೋಹರಸಿಂಗ | ೪೦ | ಮನೆಕೆಲಸ | ಧಾರವಾಡ |
| ೬ | ಮಾನಕೌರ/ ತಾರಾಸಿಂಗ | ೭೦ | ಕಬ್ಬಿಣಕೆಲಸ | ಧಾರವಾಡ |
| ಹುಬ್ಬಳ್ಳಿ | | | | |
| ೧ | ಸುವಾಹನಸಿಂಗ/ಚರಣಸಿಂಗ | ೩೬ | ಕಬ್ಬಿಣಕೆಲಸ | ಹುಬ್ಬಳ್ಳಿ |
| ೨ | ಕಿರಣಸಿಂಗ/ಅಮರಸಿಂಗ | ೩೫ | ಕಬ್ಬಿಣಕೆಲಸ | ಹುಬ್ಬಳ್ಳಿ |

| ಕ್ರಸಂ | ಹೆಸರು | ವಯಸ್ಸು | ವೃತ್ತಿ | ಊರು |
|---|---|---|---|---|
| ೩ | ಚಮನ್‌ಸಿಂಗ /ಹರಿಸಿಂಗ | ೪೦ | ಕಬ್ಬಿಣಕೆಲಸ | ಹುಬ್ಬಳ್ಳಿ |
| ೪ | ಅಜಿತ್‌ಸಿಂಗ /ಪ್ರಿತ್‌ಪಾಲಸಿಂಗ | ೪೫ | ಕಬ್ಬಿಣಕೆಲಸ | ಹುಬ್ಬಳ್ಳಿ |
| ೫ | ಧೀರಸಿಂಗ/ಪ್ರತ್ಪಾಲಸಿಂಗ | ೪೫ | ಕಬ್ಬಿಣಕೆಲಸ | ಹುಬ್ಬಳ್ಳಿ |
| **ಗೋಕಾಕ್** | | | | |
| ೧ | ದೀಪಾಕೌರ/ ಹರಿಪಾಲಸಿಂಗ | ೫೮ | ಮನೆಕೆಲಸ | ಗೋಕಾಕ್ |
| ೨ | ಪವನ್‌ಸಿಂಗ/ಹರಿಪಾಲಸಿಂಗ | ೩೫ | ಕಬ್ಬಿಣಕೆಲಸ | ಗೋಕಾಕ್ |
| **ಬೈಲಹೊಂಗಲ** | | | | |
| ೧ | ಜಗತ್‌ಸಿಂಗ/ಪ್ರೇಮಸಿಂಗ | ೪೨ | ಕಬ್ಬಿಣಕೆಲಸ | ಬೈಲಹೊಂಗಲ |
| ೨ | ಶಾಂತಿಕೌರ /ಪ್ರೇಮಸಿಂಗ | ೫೦ | ಮನೆಕೆಲಸ | ಬೈಲಹೊಂಗಲ |
| ೩ | ವಿಕ್ರಮಸಿಂಗ/ ಪ್ರೇಮಸಿಂಗ | ೪೦ | ಕಬ್ಬಿಣಕೆಲಸ | ಬೈಲಹೊಂಗಲ |
| ೪ | ಸತ್ಯನಾಮಸಿಂಗ/ ಪ್ರೇಮಸಿಂಗ | ೨೩ | ಕಬ್ಬಿಣಕೆಲಸ | ಬೈಲಹೊಂಗಲ |
| ೫ | ಸರಭತ್ಕೌರ /ಜಗತ್‌ಸಿಂಗ | ೩೮ | ಮನೆಕೆಲಸ | ಬೈಲಹೊಂಗಲ |
| **ನಿಪ್ಪಾಣಿ** | | | | |
| ೧ | ಅಮರಸಿಂಗ/ಪ್ರತಾಪಸಿಂಗ | ೩೮ | ಕಬ್ಬಿಣಕೆಲಸ | ನಿಪ್ಪಾಣಿ |
| ೨ | ತಿರುಮಕ್ಕೌರ/ಅಮರಸಿಂಗ | ೩೫ | ಮನೆಕೆಲಸ | ನಿಪ್ಪಾಣಿ |
| ೩ | ಭಗತ್‌ಸಿಂಗ /ಅಮರಸಿಂಗ | ೧೮ | ಕಬ್ಬಿಣಕೆಲಸ | ನಿಪ್ಪಾಣಿ |
| ೪ | ತಿಲಕ್‌ಸಿಂಗ/ ಅಮರಸಿಂಗ | ೧೬ | ಕಬ್ಬಿಣಕೆಲಸ | ನಿಪ್ಪಾಣಿ |
| ೫ | ಸತ್ತಿಸಿಂಗ/ಅಮರಸಿಂಗ | ೨೩ | ಕಬ್ಬಿಣಕೆಲಸ | ನಿಪ್ಪಾಣಿ |
| ೬ | ಸರೋಜಸಿಂಗ/ಸತ್ತಿಸಿಂಗ | ೨೦ | ಮನೆಕೆಲಸ | ನಿಪ್ಪಾಣಿ |
| **ಬೆಳಗಾಂವ** | | | | |
| ೧ | ಬಲಜಿತ್‌ಸಿಂಗ /ಕುಶಾಲಸಿಂಗ | ೩೮ | ಕಬ್ಬಿಣಕೆಲಸ | ಬೆಳಗಾಂವ |
| ೨ | ಬಿಷನ್‌ಸಿಂಗ/ ಸುಂದರಸಿಂಗ | ೬೦ | ಕಬ್ಬಿಣ ಕೆಲಸ | ಬೆಳಗಾಂವ |
| ೩ | ಕವಿತಾಕೌರ್/ ಬಿಷನ್‌ಸಿಂಗ | ೮೦ | ಮನೆಕೆಲಸ | ಬೆಳಗಾಂವ |
| ೪ | ಲಾಲಸಿಂಗ/ ಬಿಷನ್‌ಸಿಂಗ | ೫೫ | ಕಬ್ಬಿಣಕೆಲಸ | ಬೆಳಗಾಂವ |
| ೫ | ನಿಹ್ಪಾಲ್‌ಸಿಂಗ/ ನಿರಾನಿಸಿಂಗ | ೪೦ | ಕಬ್ಬಿಣ ಕೆಲಸ | ಬೆಳಗಾಂವ |
| **ಮುಧೋಳ** | | | | |
| ೧ | ಆನಂದಸಿಂಗ/ರಸಾಲಸಿಂಗ | ೫೫ | ಕಬ್ಬಿಣಕೆಲಸ | ಮುಧೋಳ |
| ೨ | ಚರಣಕೌರ/ ಆನಂದಸಿಂಗ | ೫೦ | ಮನೆಕೆಲಸ | ಮುಧೋಳ |
| ೩ | ಜುಗುನುರಸಿಂಗ /ಆನಂದಸಿಂಗ | ೨೮ | ಕಬ್ಬಿಣಕೆಲಸ | ಮುಧೋಳ |
| ೪ | ಅಜಿತ್‌ಸಿಂಗ /ರಸಾಲಸಿಂಗ | ೩೮ | ಕಬ್ಬಿಣಕೆಲಸ | ಮುಧೋಳ |
| **ಶಿಗ್ಗಾಂವ** | | | | |
| ೧ | ಜಶ್ವಂತಕೌರ /ಧರ್ಮಸಿಂಗ | ೭೫ | ಮನೆಕೆಲಸ | ಶಿಗ್ಗಾಂವ ಹಾವೇರಿ |
| ೨ | ಹರನಾಮಸಿಂಗ/ ಧರ್ಮಸಿಂಗ | ೬೦ | ಕಬ್ಬಿಣಕೆಲಸ | ಶಿಗ್ಗಾಂವ ಹಾವೇರಿ |
| ೩ | ಚಾಂದಸಿಂಗ /ಪ್ರೇಮಸಿಂಗ | ೩೫ | ಕಬ್ಬಿಣಕೆಲಸ | ಶಿಗ್ಗಾಂವ ಹಾವೇರಿ |
| ೪ | ಜುಗನುಸಿಂಗ /ನೇಪಾಲ್‌ಸಿಂಗ | ೩೮ | ಕಬ್ಬಿಣಕೆಲಸ | ಶಿಗ್ಗಾಂವ ಹಾವೇರಿ |
| ೫ | ಕಮಲಾಕೌರ್ /ಹರಿಸಿಂಗ | ೩೫ | ಮನೆಕೆಲಸ | ಶಿಗ್ಗಾಂವ ಹಾವೇರಿ |

# ಪರಾಮರ್ಶನ ಸೂಚಿ


**ಕನ್ನಡ**

ಕಟ್ಟೀ, ವೆಂಕಟರಂಗೋ(ಅನು)., *ಗ್ಯಾಝೆಟೀಯರು ಮುಂಬಯೀ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು: ಧಾರವಾಡ ಬೆಳಗಾವಿ ವಿಜಾಪುರ ಕಾನಡಾ ಈ ನಾಲ್ಕು ಜಿಲ್ಲೆಗಳದ್ದು* (ಮುಂಬಯಿ: ಗವರ್ನಮೆಂತ ಸೆಂತ್ರಲ್ ಬುಕ್ ಡಿಪೊ, ೧೮೯೩; ಪುನರ್ ಮುದ್ರಣ. ೧೯೮೪, ಹೊಸ ದೆಹಲಿ: ಏಷಿಯನ್ ಎಜುಕೇಷನಲ್ ಸರ್ವೀಸೆಸ್).

ಪ್ರಶಾಂತ, ಎಚ್ ಡಿ (ಸಂ)., *ಜನಸಮುದಾಯ ಸಂಪುಟ* (ಹಂಪಿ: ಕನ್ನಡ ವಿಶ್ವವಿದ್ಯಾಲಯ, ೨೦೦೦).

ಮೇತ್ರಿ, ಕೆ ಎಂ., *ಬುಡಕಟ್ಟು ಕುಲಕಸುಬುಗಳು* (ಹಂಪಿ: ಕನ್ನಡ ವಿಶ್ವವಿದ್ಯಾಲಯ, ೨೦೦೨).

ರೈ, ಎ ಸುಬ್ಬಣ್ಣ...(ಸಂ)., *ದ್ರಾವಿಡ ನಿಘಂಟು* (ಹಂಪಿ: ಕನ್ನಡ ವಿಶ್ವವಿದ್ಯಾಲಯ, ೨೦೦೧).

ಹಂಪ, ನಾಗರಾಜಯ್ಯ., *ದ್ರಾವಿಡಭಾಷಾವಿಜ್ಞಾನ* (ಬೆಂಗಳೂರು: ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೯೧).

Ananthakrishna Iyer, L K., *The Mysore Tribes and Castes* (Mysore: The Mysore University, 1930; rpt. 1998, New Delhi: Mittal Publications), 5 Vols.

*Brochure on Reservation for Scheduled Castes, Scheduled Tribes and other Categories of Backward Classes in Services and Posts* (Bangalore: Government Press, 1987).

*Brochure on Reservation and Concessions for Scheduled Castes, Scheduled Tribes and other Backward Classes...*(New Delhi: A Nabhi Publications, 2004).

Devy, G N (Chairman)., Technical Advisory Group on Denotified Nomadic and Semi-nomadic Tribes Report, 2006 (New Delhi: Ministry of Social Justice and Empowerment, Government of India).

Enthoven, R E., *The Tribes and Castes of Bombay* (Bombay: Government Central Press,1922; rpt. 1975, Delhi: Cosmo Publications) 3 Vols.

Eustace J Kitts, *A Compendium of the Castes and Tribes found in India: Census of India 1881* (Byculla: Education Sociey Press,1885; rpt.1982, Gurgaon: The Academic Press, Gurgaon).

Hassan, S S., *The Castes and Tribes of H E H Nizam's Dominions*

(Bombay: Government Central Press, 1920; rpt. 1989, New Delhi: Asian Educational Services).

Havanur, L G (Chairman)., *Karnataka Backward Classes Commission Report* (Bangalore: Government Press, 1975 -), 5 Vols.

Misra, P K, Rajalakshmi, C R, Verghese, I., *Nomads in the Mysore City* (Calcutta: Anthropological Survey of India, 1971).

Nagan Gowda, R (Chairman)., *Mysore Backward Classes Committee Report* (Bangalore: Government Press, 1979).

Nanjundayya, H V., *The Ethnographic Survey of Mysore* (Bangalore: Government Press, 1906).

Ravivarma Kumar (Chairman)., *The Karnataka State Commission for Backward Classes Special Report -2000* (Bangalore: Government Press, 2000).

Reddy, O Chinnappa (Chairman).,Report of the Karnataka Third Backward Classes Commission (Bangalore: Government Press, 1990), 2 Vols.

Risley, H H.,*The Caste and Tribes of Bengal* (Calcutta: Bengal Secretariat Press, 1891; rpt.1981, Calcutta: Firma Mukhopadhyay), vols

Russell, R V and Hiralal, *The Tribes and Castes of the Central Provinces of India* (London: Macmillan and Co., 1916; rpt. 1975, New Delhi:Cosmo Publications), vols

Shashi, S S., *The World of Nomads*(New Delhi: Lotus Press, 2006).

Singh, K S., *The Scheduled Castes* (Delhi: Oxford University, Press,1993) People of Inida National Series, vol. 2

........ ., *The Scheduled Tribes* (Delhi: Oxford University, Press,1994) People of Inida National Series, vol. 3

........ ., *India's Communities* (Delhi: Oxford University, Press,1998) People of Inida National Series, vol.4-6.

........ (General Editor)., *People of India : Karnataka* (New Delhi: Anthropological Survey of India, 2003) Volume XXVI.

*The Annual Administration Report on the Working of the Criminal Tribes Act in the Bombay Presidency Part - I* (Bombay: Govt. Central Press, 1936)

*The New Encyclopaedia Britannica* (The University of Chicago, 1992)

Thurrston, E., *Ethnographic Notes on Southern India* (Madrss: Government Press, 1906).

..........., *Castes and Tribes of Southern India* (Madrss: Government Press, 1909; rpt. 1975, Delhi: Cosmo Publications) 7 vols.

Venkataswamy, T (Chairman).,Report of the Karnataka Second Backward Classes Commission (Bangalore: Government Press, 1986), 3 Vols.



ಸಿಕ್ಲಿಗರು ವಾಸಿಸುವ ಗುಡಾರ



ಸಿಕ್ಲಿಗರು ವಾಸಿಸುವ ಗುಡಿಸಲು



ಸಿಕ್ಲಿಗರು ಬೀಡುಬಿಟ್ಟು ಹಾಕಿರುವ ಡೇರೆಗಳು



ವಿಶ್ರಾಂತಿ ಸಮಯದಲ್ಲಿ ಕುಶೋಲಪಾಚಾರಿ ಮಾತುಕತೆಯಲ್ಲಿ ಸಿಕ್ಲಿಗರು



ತಗಡಿನ ಮನೆಯ ಮುಂದೆ ನಿಂತಿರುವ ಸಿಕ್ಲಿಗರ ಕುಟುಂಬ




ಕೆಲಸದಲ್ಲಿ ನಿರತನಾದ ಸಿಕ್ಲಿಗ ವ್ಯಕ್ತಿ



ಅಳತೆ ಮಾಪನಗಳಾದ ಸೇರು, ಪಾವು, ಚೌಟುಗಳು ಸಿದ್ಧಪಡಿಸುತ್ತಿರುವ ಸಿಕ್ಲಿಗ



ಗ್ರಾಹಕರ ಅಭಿರುಚಿಗೆ ತಕ್ಕಂತೆ ವಸ್ತುಗಳನ್ನು ತಯಾರಿಸುತ್ತಿರುವುದು



ಗೃಹೋಪಯೋಗಿ ವಸ್ತುಗಳ ತಯಾರಿಕೆಯಲ್ಲಿ ನಿರತರಾದ ಸಿಕ್ಲಿಗರು



ನಿತ್ಯ ಕಾಯಕದಲ್ಲಿ ನಿರತರಾದ ಸಿಕ್ಲಿಗರು



ಕತ್ತಿ, ಮಚ್ಚು, ಲಾಂಗಗಳಿಗೆ ಸಾಣೆ ನೀಡುವಲ್ಲಿ ನಿರತನಾದ ಸಿಕ್ಲಿಗ



ವಸ್ತುಗಳ ಆಕಾರಕ್ಕೆ ತಕ್ಕಂತೆ ತಗಡನ್ನು ಕತ್ತರಿಸುವಲ್ಲಿ ನಿರತನಾದ ಸಿಕ್ಲಿಗ



ಕುಟುಂಬ ಪರಿವಾರದೊಂದಿಗೆ ಮಾತನಾಡುತ್ತ ಕೆಲಸದಲ್ಲಿ ತೊಡಗಿರುವ ಸಿಕ್ಲಿಗ



ಅಳತೆ ಮಾಪನಗಳಾದ ಸೇರು, ಪಾವು, ಚೌಟುಗಳು, ಕಬ್ಬಿಣದ ಹಾರೆ ಮಾರಾಟಕ್ಕೆ ಸಿದ್ಧವಾಗಿವೆ



ಕಬ್ಬಿಣದ ಗೋಪುರ ಕಟ್ಟುತ್ತಿರುವ ಸಿಕ್ಲಿಗ



ತಯಾರಿಸಿದ ವಸ್ತುಗಳನ್ನು ಗ್ರಾಹಕರಿಗೆ ಮಾರಾಟ ಮಾಡುತ್ತಿರುವುದು



ಲಂಗರ ಹಬ್ಬದಲ್ಲಿ ಅಡುಗೆ ತಯಾರಿಸುತ್ತಿರು ಸಿಕ್ಲಿಗ ಮಹಿಳೆಯರು



ಓಕಳಿ ಹಬ್ಬದಲ್ಲಿ ಬಣ್ಣಗಳಿಂದ ಮಿಂದ ಸಿಕ್ಲಿಗರು



ಮದುಮಕ್ಕಳಿಗೆ ಅರಿಷಿಣ ಹಚ್ಚುತ್ತಿರುವುದು



ಮದುಮಕ್ಕಳನ್ನು ಮೆರವಣಿಗೆಯಿಂದ ಕರೆತ್ತರುತ್ತಿರುವುದು